# ಪ್ರಕಾಶಕರ ಪುಟ

'ಮಾಲೆ'ಯ ಹೊಸ ವರ್ಷ ಹೊಸರೀತಿಯ ಪ್ರಕಟನೆಯೊಂದಿಗೆ ಆರಂಭವಾಗಿದೆ. 'ಕೇಡಿಗನ ಕಿಡಿಗಳು' ಒಂದು ಹೊಸ ಪ್ರಯೋಗ, ಈ ರೀತಿಯ ಪುಸ್ತಕ ಕನ್ನಡ ಪುಸ್ತಕಕ್ಷೇತ್ರದಲ್ಲಿ ಹೊರಬೀಳುತ್ತಿರುವುದು ಇದೇ ಮೊದಲೆಂದು ನಾವು ಭಾವಿಸಿದ್ದೇವೆ.

ಹಿತವಾದ ಮನರಂಜನೆಯನ್ನು ಒದಗಿಸುವುದು ಈ ಪುಸ್ತಕದ ಉದ್ದೇಶವಾಗಿದೆ. ಇವರಲ್ಲಿ ನಗೆಬರಹಗಳ ಎಲ್ಲ ಸ್ವರೂಪಗಳನ್ನೂ ಕಾಣಬಹುದು. ಈ ಸಂಕಲನದಲ್ಲಿ 'ಕಿಡಿ'ಗಳಿವೆ; ಹರಟೆಯಿದೆ; ವಿನೋದ ಪ್ರಸಂಗಗಳಿವೆ; ಹೊಸ ರೀತಿಯ ಹಲವು ಹಾಸ್ಯಲೇಖನಗಳಿವೆ. ಈ ವೈವಿಧ್ಯತೆಯಿಂದಾಗಿ ಎಲ್ಲ ಓದುಗರಿಗೂ ಈ ಪುಸ್ತಕ ಮೆಚ್ಚುಗೆಯಾಗುವುದರಲ್ಲಿ ಸಂದೇಹವಿಲ್ಲ.

ನಮ್ಮ ಮುಂದಿನ ಪ್ರಕಟನೆ **ಶ್ರೀ ಬಸವರಾಜ ಕಟ್ಟೀಮನಿಯವರ** ಸುಮಾರು ೪೫೦ ಪುಟದ ಕಾದಂಬರಿ— **'ಜ್ವಾಲಾಮುಖಿಯ ಮೇಲೆ'**

**ಪ್ರಕಾಶಕರು.**

# ಕೇಡಿಗನ ಮಾತು

ದೀಪಾವಳಿಯಲ್ಲಿ ಮಕ್ಕಳು ಹೊತ್ತಿಸುವ ಹೂವಿನ ಕಡ್ಡಿಗಳನ್ನು ನೀವು ನೋಡಿರಬಹುದು. ಈ ಕಡ್ಡಿಗಳನ್ನು ಹೊತ್ತಿಸಿದಾಗ ಹೂವಿನ ಕಿಡಿಗಳು ಹಾರುತ್ತವೆ. ಇವು ನೋಡಲು ಬಹು ಚೆನ್ನು. ಕಾಮನಬಿಲ್ಲನ್ನು ನಾಚಿಸುವ ಬಣ್ಣಗಳು ಕಣ್ಮನಗಳನ್ನು ತಣಿಸುತ್ತವೆ. ಈ ಕಿಡಿಗಳು ನಮ್ಮ ಕೈ ಮೇಲೆ ಬಿದ್ದಾಗ ಯಾವ ಅಪಾಯವೂ ತಟ್ಟುವುದಿಲ್ಲ. ಅದರಂತೆ ಸಹ "ಕೇಡಿಗನ ಕಿಡಿಗಳು." ನಾನು ಪತ್ರಿಕೋದ್ಯಮಿಯ ಘನತೆಗೆ ತಕ್ಕಂತೆ ಅನೇಕ ಪತ್ರಿಕಾ ಲಯಗಳಲ್ಲಿ ಕೆಲಸ ಮಾಡಿದ್ದೇನೆ. ಹೀಗೆ, ಕವಿಗಳು ಹೇಳುವಂತೆ ದುಂಬಿಯು ಮಕರಂದದಿಂದ ಮಕರಂದಕ್ಕೆ ಹಾರುವಂತೆ, ಕಚೇರಿಯಿಂದ ಕಚೇರಿಗೆ ಹಾರುವಾಗ ಬೇರೆ ಬೇರೆ ಹೆಸರುಗಳನ್ನು ಇಟ್ಟುಕೊಂಡು (ಇದಕ್ಕೆ ಕಾವ್ಯ ನಾಮ ಎಂಬ ದೊಡ್ಡ ಹೆಸರು ಬೇರೆ ಕೊಟ್ಟಿದ್ದಾರೆ) ಪತ್ರಿಕೆಗಳಿಗೆ ಬರೆಯ ಬೇಕಾದ ಅನಿವಾರ್ಯ ಸಂದರ್ಭಗಳುಂಟಾದವು. ಅವುಗಳಲ್ಲಿ "ಕೇಡಿಗ" ಎಂಬುದೂ ಒಂದು "ಕಾವ್ಯನಾಮ" ಅಥವಾ ಕಾವ್ಯಕ್ಕೆ ನಾಮವೋ? ತಿಳಿ ಯದು.

ಈ ಸಂಕಲನಕ್ಕೆ "ಕೇಡಿಗನ ಕಿಡಿಗಳು" ಎಂಬುದಾಗಿ ನಾಮಕರಣ ಮಾಡಲು ನನ್ನ ಪ್ರಕಾಶಕ-ಗೆಳೆಯರು ತಿಳಿಸಿದರು. ಒಪ್ಪಿಕೊಂಡೆ—ಇಲ್ಲದಿದ್ದರೆ ಪುಸ್ತಕ ಪ್ರಕಟಿಸಲು ಹಿಂಜರಿಯಬಹುದೆಂದು.

ಈ ಕಿಡಿಗಳ ಉದ್ದಿಶ್ಯವೇನು, ಸಾಹಿತ್ಯದಲ್ಲಿ ಯಾವ ವಿಭಾಗಕ್ಕೆ ಸೇರು ತ್ತವೆ, ಇವು ಸಾಹಿತ್ಯವೇ, ಮುಂತಾದವುಗಳ ಗೊಂದಲಕ್ಕೆ ವಾಚಕರು ಹೋಗ ಕೂಡದೆಂದು ಸೂಚಿಸಬಯಸುತ್ತೇನೆ. ಇವು ಹೂವಿನ ಕಡ್ಡಿಯ ಕಿಡಿಗಳಂತೆ ನಿರುಪದ್ರವ ಹಾಸ್ಯದ ಕಿಡಿಗಳು—ನಕ್ಕು ನಲಿಯಿರಿ, ಓದಿದ ಮೇಲೆ ಪುಸ್ತಕ ವನ್ನು ಆಚೆಗೆ ಎಸೆಯಿರಿ!

—ನಾಡಿಗೇರ್ ಕೃಷ್ಣರಾವ್.

# ಕೇಡಿಗನ ಕಿಡಿಗಳು

"ನಿಮ್ಮ ಕಾಯಿಲೆ ಏನನ್ನುವುದು ನನಗೆ ಸರಿಯಾಗಿ ತಿಳಿಯದು. ಕುಡಿತವೇ ಕಾರಣವಿರಬೇಕು"

"ಆಗಲಿ ಡಾಕ್ಟರೇ, ನೀವು ಸರಿಯಾಗಿದ್ದಾಗ ಬರುತ್ತೇನೆ."

* * *

ಸರ್ವಭಕ್ಷಕನೊಬ್ಬನು ಮೊನ್ನೆ 8 ಕಬ್ಬಿಣದ ಮೊಳೆ, 1 ಸೀಸೆ ಸೀಮೆ ಎಣ್ಣೆ, 2 ಬ್ಲೇಡ್, ಮುಂತಾದುವುಗಳನ್ನು ತಿಂದ. ಆದರೆ ನಮ್ಮ ಡಿಪೋದ ಅಕ್ಕಿಯನ್ನು ತಿನ್ನಲು ತೋರಿಸಿದಾಗ ಹೇಳದೆ ಕೇಳದೆ ಓಡಿಹೋದ.

* * *

ಮೈಸೂರಿನ ನೇಸೆ ಎಲ್ಲರ ಪ್ರೀತಿ ವಿಶ್ವಾಸಗಳನ್ನೂ ಗಳಿಸಿದೆ.

—ಮೈಸೂರಿನ ವಿಷಯವೇ ಹೀಗೆ ; ಮೈಸೂರುಪಾಕ್ ಜಗತ್ಪ್ರಸಿದ್ಧಿಯಾಗಿದೆ.

* * *

ಜನತೆ ಪಾನ ನಿರೋಧದ ಪರ— ಡಾ|| ಪ್ರಸಾದ್

—ರಾಷ್ಟ್ರಾಧ್ಯಕ್ಷರು ಕುಡಿಯದಿದ್ದವರನ್ನು ಕೇಳಿದಂತೆ ತೋರುತ್ತದೆ.

* * *

ಇಂದಿನ ಕವಿಗಳಿಗೂ ಹಿಂದಿನ ಕವಿಗಳಿಗೂ ವ್ಯತ್ಯಾಸ ಏನು ?

—ಇಂದಿನ ಕವಿಗಳು ಜೀವಂತವಾಗಿದ್ದರೂ ಅವರ ಕೃತಿಗಳು ಸತ್ತು ಹೋಗಿವೆ. ಹಿಂದಿನ ಕವಿಗಳು ಸತ್ತುಹೋಗಿದ್ದರೂ ಅವರ ಕೃತಿಗಳು ಜೀವಂತವಾಗಿವೆ.

ಇಸ್ಪೀಟು ಎಲೆಗಳನ್ನು ಈಗಿನ ಕಾಲಕ್ಕೆ ತಕ್ಕಂತೆ ಈ ರೀತಿ ಬದಲಾಯಿಸಲಾಗಿದೆ :

ರಾಜ-ರಾಜಪ್ರಮುಖ್ ; ರಾಣಿ-ರಾಣೀಪ್ರಮುಖ್ , (ಆಧಾರ—ಸರ್ದಾರ್ ಪಟೇಲ್) ಗುಲಾಮ-ಸಾಮಾನ್ಯ ಪ್ರಜೆ (ಆಧಾರ—ವಿಶ್ವಸಂಘದ ಪ್ರಣಾಳಿಕೆ)

* * *

ಆಂಗ್ಲ ಮಹಿಳೆಯೊಬ್ಬಳು ಬರೀ ನೀರು ಕುಡಿದು ಮುವ್ವತ್ತೈದು ದಿನಗಳವರೆಗೆ ಬದುಕಿದ್ದಳಂತೆ (ಪತ್ರಿಕೆ)

—ಅವಳ ರಹಸ್ಯ ತಿಳಿಯಲು ನಮ್ಮ ಆಹಾರ ಸಚಿವರು ಬ್ರಿಟನ್ನಿಗೆ ಯಾತ್ರೆ ಕೈಕೊಳ್ಳಬಹುದು .

* * *

ಜರ್ಮನ್ ವಿಜ್ಞಾನಿಗಳು ಇದ್ದಲಿನಿಂದ ಆಹಾರ ತಯಾರಿಸಲು ಪ್ರಯೋಗಗಳನ್ನು ನಡೆಸಿದ್ದಾರೆ.

—ಏನು ಮಹಾ, ಮನೆಯಲ್ಲಿ ನಮ್ಮ ಹುಡುಗರು ಈ ಪ್ರಯೋಗವನ್ನು ಬಹಳ ಹಿಂದಿನ ಕಾಲದಿಂದಲೂ ಮಾಡುತ್ತಿದ್ದಾರೆ

* * *

ಪೇಟೆಗಳಲ್ಲಿ ಸೊಳ್ಳೆ ಪರದೆಗಳೇ ಸಿಕ್ಕುತ್ತಿಲ್ಲ.

—ಹೆಂಗಸರು ಸೊಳ್ಳೆ ಪರದೆಗಳನ್ನು ಸೀರೆಗಳನ್ನಾಗಿ ಉಟ್ಟುಕೊಳ್ಳುತ್ತಿರುವುದರಿಂದಲೇ ಈ ಅಭಾವಕ್ಕೆ ಕಾರಣ ಇರಬೇಕು.

* * *

ಕವಿಗಳೊಬ್ಬರು ಹುಚ್ಚರಾಸ್ಪತ್ರೆಯ ಮೇಲೆ ಒಂದು ಕವನ ಬರೆದಿದ್ದಾರೆ.

—ಅವರು ಅದನ್ನು ಅದರ ಒಳಗೇ ಬರೆದಿದ್ದರೆ ಚೆನ್ನಾಗಿತ್ತು.

ಸರ್ಕಸ್ಸಿನವರಿಗೂ ನಮಗೂ ಇರುವ ವ್ಯತ್ಯಾಸ ಇಷ್ಟೇ.

ಅವರು ಹಣ ತೆಗೆದುಕೊಂಡು ಲಾಗ ಹಾಕುತ್ತಾರೆ, ನಾವು ಹಣ ಇಲ್ಲದೆ ಲಾಗಾ ಹಾಕುತ್ತೇವೆ.

* * *

ಕಾಫಿ ಕಾಯಿಸುತ್ತಿದ್ದಾಗ ಒಬ್ಬ ಹುಡುಗಿಯ ಲಂಗಕ್ಕೆ ಬೆಂಕಿ ಹತ್ತಿ ಮಡುಗಿ ಸುಟ್ಟು ಹೋದಳಂತೆ

—-ಕಾಫಿಯಿಂದಾಗುವ ಅನರ್ಥಕ್ಕೆ ಇದೊಂದು ಉದಾಹರಣೆ.

* * *

ಈಗ ಭಾರತದಲ್ಲಿ ಕಳೆದ ವರ್ಷಕ್ಕಿಂತ ಹೆಚ್ಚು ಸೀಮೆಂಟ್ ತಯಾರಾಗುತ್ತಿದೆ— ಭಾರತ ಪಾರ್ಲಿಮೆಂಟಿನಲ್ಲಿ ಹೇಳಿಕೆ.

—ಹೋಟಲುಗಳಲ್ಲಿ ಈಗ ತಯಾರಾಗುತ್ತಿರುವ ನವಧಾನ್ಯಗಳ ಭಾತುಗಳನ್ನೂ ಅವರು ಲೆಕ್ಕಕ್ಕೆ ತೆಗೆದುಕೊಂಡಿರಬೇಕು

* * *

ತಲೆದಿಂಬಿನಡಿಯಲ್ಲಿರುವ ರೇಡಿಯೋ ಕಂಡುಹಿಡಿದಿದ್ದಾರಂತೆ

—ನಮ್ಮ ಮನೆ ಮಗುವನ್ನು ನೋಡಿ ಈರೀತಿ ಹೇಳುತ್ತಿದ್ದಾರೆಂದು ನನಗೆ ಗೊತ್ತು

* * *

ಈಚೆಗೆ ಶಿಶುಸಾಹಿತ್ಯ ಪ್ರಕಟನೆಗಳು ತುಂಬಾ ಹೆಚ್ಚಾಗುತ್ತಿವೆ. (ಸಾಹಿತಿಗಳೊಬ್ಬರ ಭಾಷಣದಲ್ಲಿ)

....ಹೌದು ದೊಡ್ಡವರು ಸಹ ಹುಡುಗುಹುಡುಗಾಗಿಯೇ ಬರೆಯುತ್ತಿದ್ದಾರೆ.

* * *

ಅಮೇರಿಕ ಒಂದು ಬಗೆದರೆ ರಷ್ಯಾ ಒಂದು ಬಗೆಯಿತು

"ನಿಮ್ಮ ಹುಡುಗಿಯನ್ನು ಮದುವೆಯಾಗಲು ನನಗೆ ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡಬೇಕು"

"ಇದೇನು ಕಂಟ್ರೋಲ್ ರೇಟೋ ? ಬ್ಲಾಕ್ ಮಾರ್ಕೆಟ್ ರೇಟೋ ?"

* * *

ಹಿಂದೂ ಕೋಡ್ ಮಸೂದೆಯನ್ನು ಸನಾತನಿಗಳು ತೀವ್ರವಾಗಿ ಪ್ರತಿಭಟಿಸುತ್ತಿದ್ದಾರೆ

—ಹೆಂಗಸರಿಗೆ ಕೋಡು ಮೂಡುವುದೆಂಬ ಹೆದರಿಕೆಯೇ ಈ ಪ್ರತಿಭಟನೆಗೆ ಕಾರಣವಿರಬೇಕು.

* * *

ಮಳೆ ಬರದೆ ಇರುವುದಕ್ಕೆ ಕಾರಣ ಹುಡುಕಲು ತಜ್ಞರ ಸಮಿತಿಯೊಂದನ್ನು ಸರ್ಕಾರವು ರಚಿಸುವುದೆಂಬ ಸುದ್ದಿಯು ಆಧಾರರಹಿತವಾದದ್ದೆಂದು ಇದೀಗ ತಿಳಿದು ಬಂದಿದೆ.

* * *

ಹೋಟಲೊಂದರಲ್ಲಿ ಇಬ್ಬರಿಗೆ ಯಾವುದೋ ಕಾರಣಕ್ಕೆ ಜಗಳ ಉಂಟಾಗಿ ಮಾರಾಮಾರಿ ಆಯಿತಂತೆ. ಇಬ್ಬರೂ ಬೊಂಬಾಯಿ ಬೋಂಡಾಗಳಿಂದ ಹೊಡೆದಾಡಿದರಂತೆ ಇಬ್ಬರಿಗೂ ತೀವ್ರ ಗಾಯಗಳಾಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಹೊಂದುತ್ತಿದ್ದಾರಂತೆ

* * *

ಮನೆಯ ಯಜಮಾನ - (ಹೊಸದಾಗಿ ಬಂದ ಜವಾನನಿಗೆ) ಅವು ಸಣ್ಣ ಗಿಡಗಳು, ಅಷ್ಟು ನೀರು ಸುರಿದರೆ ಅವು ಸತ್ತುಹೋಗುತ್ತವೆ ಮೊದಲು ನೀನು ಏನು ಕೆಲಸ ಮಾಡುತ್ತಿದ್ದೆ

ಜವಾನ— ಹಾಲು ಮಾರುತ್ತಿದ್ದೆ

* * *

"ಆ ಹುಡುಗಿ ಉಟ್ಟಿರುವ ಸೀರೆಗಿಂತ ಒಳಗೆ ಹಾಕಿಕೊಂಡಿರುವ ಲಂಗವೇ ಚೆನ್ನಾಗಿದೆ"

## ಚಪ್ಪಲಿ ಅನುಭವ

ಒಂದು ಸಾರಿ ಚಪ್ಪಲಿ ತೆಗೆದುಕೊಳ್ಳಲು ಒಂದಂಗಡಿಗೆ ಹೋದೆ. ಅಂಗಡಿಯವನು ಒಂದು ಜೊತೆ ತೋರಿಸುತ್ತಾ "ಇವು ಚೆನ್ನಾಗಿವೆ ಸ್ವಾಮೀ, ನಿಮ್ಮ ಮುಖಕ್ಕೆ ಒಪ್ಪುತ್ತವೆ" ಎಂತ ಹೇಳಿದ. ಏನನ್ಯಾಯ, ಮುಖಕ್ಕೆ ಯಾರಾದರೂ ಚಪ್ಪಲಿ ಹಾಕಿಕೊಳ್ಳುತ್ತಾರೆಯೇ? ಮುಖಕ್ಕೆ ಚಪ್ಪಲಿ ಒಪ್ಪುವುದೆಂದರೇನು? ಏನೋ ಸಾಹಿತ್ಯ ಮತ್ತು ಭಾಷೆಯ ಜ್ಞಾನವಿಲ್ಲದೆ ಅವನು ಆ ರೀತಿ ಪಸಾತನಾಡಿರಬೇಕೆಂದು "ಹೋಗಲಿ. ಇವು ಬಾಳಿಕೆ ಬರುತ್ತಾವೇನಯ್ಯ?" ಎಂದು ಕೇಳಿದೆ. ಅದಕ್ಕವನು, "ಆರು ತಿಂಗಳವರೆಗೆ ನೀವು ಹಲ್ಲಿನಲ್ಲಿ ಹಾಕಿ ಜಗಿದರೂ ಇವು ಕಿತ್ತುವುದಿಲ್ಲ" ಅಂತ ಹೇಳಿದ. ಚಪ್ಪಲಿ ಗಟ್ಟಿಯಾಗಿದೆಯೋ ಇಲ್ಲವೋ ಎಂದು ಯಾರಾದರೂ ಹಲ್ಲಿಲ್ಲಿ ಕಚ್ಚುತ್ತ ಕುಳಿತುಕೊಳ್ಳುತ್ತಾರೆಯೇ? ಅಥವಾ ಆರುತಿಂಗಳು ಕಾಲ ಇದ್ದ ಕೆಲಸ ಬಿಟ್ಟು ಆ ಕೆಲಸ ಮಾಡಲಾದೀತೆ? ಏನೋ ಬುದ್ಧಿ ಇಲ್ಲದವನು ಎಂಬ ತೀರ್ಮಾನಕ್ಕೆ ಬಂದು, "ಇರಲಪ್ಪಾ, ಈ ನಮೂನೆ ಚೆನ್ನಾಗಿದೆಯೆ? ಅಂತ ಕೇಳಿದೆ. ಅದಕ್ಕವನು "ಇದಕ್ಕಿಂತಲೂ ಒಳ್ಳೆಯ ನಮೂನೆಯದನ್ನು ನೀವು ಹೊಲಿದು ಕೊಡಿ, ನಿಮಗೆ ಹತ್ತು ರೂಪಾಯಿ ಇನಾಮು ಕೊಡುತ್ತೇನೆ" ಅಂತ ಹೇಳಿದ ಸಾಹಿತಿಯಾದ ನಾನು ಹತ್ತು ರೂಪಾಯಿ ಸಂಪಾದಿಸಲು ಇನ್ನು ಚಮ್ಮಾರನ ಕೆಲಸ ಬೇರೆ ಕೈಕೊಳ್ಳಬೇಕೆ" ಎಂದು ಹೇಳುತ್ತ ಅವನು ತೋರಿಸಿದ ಜೊತೆಯನ್ನು ಅವನು ಹೇಳಿದ ಬೆಲೆ ಕೊಟ್ಟು ಕೊಂಡುಕೊಂಡು ಮನೆಕಡೆ ದಾರಿ ಹಿಡಿದೆ.

* * *

ಒಂದು ಊರಿನಲ್ಲಿ ಎರಡು ಚಿತ್ರ ಮಂದಿರಗಳು ಎದಿರುಬದಿರಾಗಿವೆ. ಒಂದು ಚಿತ್ರಮಂದಿರದಲ್ಲಿ "ಸೀದಾರಸ್ತಾ" ಆರಂಭವಾಗಿತ್ತು. ಇನ್ನೊಂದರಲ್ಲಿ "ಬ್ಲಾಕ್ ಮಾರ್ಕೆಟ್" ಆರಂಭವಾಗಿತ್ತು. ಆದರೆ ಜನರು ಅಭ್ಯಾಸ ಬಲದಿಂದ "ಬ್ಲಾಕ್ ಮಾರ್ಕೆಟ್" ಚಿತ್ರಕ್ಕೆ ಹೋಗುತ್ತಿದ್ದರೇ ವಿನಾ "ಸೀದಾರಸ್ತಾ" ಚಿತ್ರಕ್ಕೆ ಹೋಗುತ್ತಿರಲಿಲ್ಲವೆಂದು ತಿಳಿದುಬಂದಿದೆ.

* * *

ಇಬ್ಬರು ಪ್ರೊಫೆಸರುಗಳ ಮೇಲೆ ಕೈರೊ ವಿದ್ಯಾರ್ಥಿಯೊಬ್ಬನು ಗುಂಡು ಹಾರಿಸಿ ಗಾಯಗೊಳಿಸಿದ.

—ಗುರುದಕ್ಷಿಣೆ ಸಲ್ಲಿಸುವುದರಲ್ಲಿ ಇದೊಂದು ಹೊಸ ವಿಧಾನ

* * *

"ನಿನ್ನೆ ನನ್ನ ನಾಯಿ ಕಳೆದುಹೋಯಿತು"

"ಪತ್ರಿಕೆಗಳಲ್ಲಿ ಜಾಹಿರಾತು ಕೊಡಯ್ಯ"

"ಅದರಿಂದೇನು ಪ್ರಯೋಜನ? ನನ್ನ ನಾಯಿಗೆ ಓದುವುದಕ್ಕೆ ಬರುವುದಿಲ್ಲ

* * *

ಮೊನ್ನೆ ಮುಂಜಿನ ದಿನದಿಂದ ಭದ್ರತಾ ಸಮಿತಿ ಸೇರಲಿಲ್ಲ

—ಭದ್ರತಾ ಸಮಿತಿಗೆ ಮುಂಜು ಕವಿದಿದೆಯೆಂದು ನಾವು ಮೊದಲೇ ಊಹಿಸಿದ್ದೆವು

* * *

ಅರಣ್ಯ ಸಂಪತ್ತಿನಲ್ಲಿ ಮೈಸೂರು ಇಡೀ ಭಾರತವನ್ನೇ ಮೀರಿಸಿದೆ —ಡಾ|| ಎಂ. ಎ. ಹಬರ್ಮನ್.

—ಇದನ್ನು ಮೈಸೂರಿನವರು ಯಾವರೀತಿ ಅರ್ಥ ಮಾಡಬೇಕು?

ಲಂಡನ್ನಿನ ಆಸ್ಪತ್ರೆಯೊಂದರಲ್ಲಿ ಹುಚ್ಚು ಹಿಡಿದವರಿಗೆ ಸಂಗೀತದಿಂದ ಚಿಕಿತ್ಸೆ ಮಾಡಿಸುವರಂತೆ.

—ಆದರೆ ಸಂಗೀತದಿಂದಲೇ ಹುಚ್ಚು ಹಿಡಿದವರಿಗೆ ಏನು ಮಾಡುತ್ತಾರೆಂಬುದು ಗೊತ್ತಿಲ್ಲ.

* * *

ಇಡೀ ಪ್ರಪಂಚವೇ ಇದ್ದಿಲು ಮಯವಾಗಿದೆ ಇದ್ದಲಿನಿಂದ ಎರಡು ಲಕ್ಷ ವಸ್ತುಗಳನ್ನು ತಯಾರಿಸಬಹುದು, ಎಂದು ಓಹಿಯೋ ಡಾಕ್ಟರೊಬ್ಬರು ಅಭಿಪ್ರಾಯ ಪಟ್ಟಿದ್ದಾರೆ

—ನಮ್ಮೂರಿನ ಹೋಟೆಲಿನವರು ಎಷ್ಟೋ ತಿಂಡಿಗಳನ್ನು ಇದ್ದಲಿನಿಂದಲೇ ತಯಾರಿಸುತ್ತಿದ್ದಾರೆ.

* * *

1952ರಲ್ಲಿ ಮೂರನೆಯ ಮಹಾಯುದ್ಧ ಆರಂಭವಾಗುವುದು ಖಂಡಿತವೆಂದು ಕಲ್ಕತ್ತೆಯ ಸುಪ್ರಸಿದ್ಧ ಜ್ಯೋತಿಷ್ಕರೊಬ್ಬರು ಭವಿಷ್ಯ ನುಡಿದಿದ್ದಾರೆ.

—ಇನ್ನುಮೇಲೆ ಈ ಯುದ್ಧ ಭವಿಷ್ಯಗಳನ್ನು ಹೇಳುವುದನ್ನು ನಿಲ್ಲಿಸಬೇಕು ಇದರ ಸುಳಿವು ತಿಳಿದ ವರ್ತಕರು ಈಗನಿಂದಲೇ ಸಾಮಾನುಗಳನ್ನು ದಾಸ್ತಾನು ಮಾಡಲು ಆರಂಭಿಸುತ್ತಾರೆ

* * *

"ನನ್ನ ತಮ್ಮ ಮಿಲಿಟರಿಗೆ ಸೇರಿದ"

"ಅಷ್ಟೋ ಹಾಗಾದರೆ ಯುದ್ಧಕ್ಕೆ ಹೋಗುತ್ತಾನೆ ಅನ್ನಿ"

"ಇಲ್ಲ ಮಿಲಿಟರಿ ಹೋಟಲಲ್ಲಿ ಕೆಲಸಕ್ಕೆ ಸೇರಿದ್ದಾನೆ'

* * *

"ನಾನು ಈ ಹಬ್ಬಕ್ಕೆ ಎರಡು ಕೋಟು ಹೊಲಿಸಿದೆ"

"ನೀವೇ ಪುಣ್ಯಾವಂತರು"

"ಪುಣ್ಯ ಏನು ಬಂತು, ಇದ್ದ ಎರಡು ಕೋಟುಗಳು ಹಂದುಹೋಗಿದವು. ಅವನ್ನೇ ಈ ಹಬ್ಬದಲ್ಲಿ ರಿಪೇರಿ ಮಾಡಿಸಿದೆ.

"ನನ್ನ ತಮ್ಮ ಒಂದೇ ನಂಬರಿನಲ್ಲಿ ಫೇಲಾದ"

"ಪಾಪ"

"280ನೇ ರಿಜಿಸ್ಟರ್ ನಂಬರಿನವನು ಪ್ಯಾಸ್ ಆಗಿದ್ದಾನೆ 279 ನನ್ನ ತಮ್ಮನ ರಿಜಿಸ್ಟರ್ ನಂಬರ್. ಅವನು ಫೇಲಾಗಿದ್ದಾನೆ"

* * *

"ನನ್ನ ಹೆಂಡತಿಗೆ ಚಪ್ಪಲಿ ತೆಗೆಮುಕೊಳ್ಳಬೇಕಾಗಿದೆ"

"ಅಂಥಾದ್ದೇನು ಮಾಡಿದಳು ?"

"ಏನೂ ಇಲ್ಲ, ಒಂದು ಜೊತೆ ಹೊಸ ಫ್ಯಾಷನಬಲ್ ಚಪ್ಪಲಿ ಕೊಂಡು ಕೊಳ್ಳಬೇಕಾಗಿದೆ"

* * *

ಅವಳು ಪೌಡರ್ ಹಚ್ಚಿಕೊಂಡರೆ, ಒಬೆ ಹಿಂದಿನ ಗೋಡೆಗೆ ಸುಣ್ಣ ಬಳಿದಂತಿರುತ್ತದೆ.

* * *

"ನನ್ನ ಹಸ್ತಸಾಮುದ್ರಿಕ ಸ್ವಲ್ಪ ನೋಡಿ, ನನಗೇನಾದರೂ ಒಂದು ಬಾಡಿಗೆ ಮನೆ ಸಿಕ್ಕುತ್ತದೆಯೋ ಹೇಗೆ ಎಂದು ?"

* * *

ನಮ್ಮ ಬೀದಿಯ ರೇಷನ್ ಇನ್‌ಸ್ಪೆಕ್ಟರು "ಹೆಗ್ಗಣಗಳು" ಎಂಬ ವಿಚಾರವಾಗಿ ಭಾಷಣ ಮಾಡಲಿದ್ದಾರೆ

* * *

ಪತ್ರಿಕೆಯಲ್ಲಿನ ತಲೆಬರಹಗಳು !

ನಾಡಿಗೇರರ ಆಗಮನ; ಚಪ್ಪಲಿಗಳ ಕಳವು.

## ತಾರೆ—ಸಿಂಹ

ಒಂದು ಚಿತ್ರ ತಯಾರಿಕಾ ಕಂಪನಿಯವರು ಸರ್ಕಸ್ ದೃಶ್ಯಗಳಿರುವ ಒಂದು ಚಿತ್ರವನ್ನು ತಯಾರಿಸುತ್ತಿದ್ದರು. ತಾರೆಯೊಬ್ಬಳು ಸಿಂಹದ ಮೇಲೆ ಹತ್ತಿ ಕೂತುಕೊಳ್ಳಬೇಕಾಗಿತ್ತು. ಅದರಂತೆ ತಾರೆ ಸಿಂಹದ ಮೇಲೆ ಹತ್ತಿ ಕೂತುಕೊಂಡಳು. ಚಡ್ಡಿ ಮತ್ತು ಬಾಡಿ ವಿನಹ ಅವಳ ಮೈಮೇಲೆ ಬೇರೆ ಬಟ್ಟೆ ಯಾವುದೂ ಇರಲಿಲ್ಲ ಸಿಂಹಕ್ಕೆ ಏನು ತೋಚಿತೋ ಏನೋ ತಾರೆಯ ತೊಡೆಗೆ ಬಾಯಿ ಹಾಕಿ ಕಚ್ಚಿತು.

ಸಿಂಹದ ಮಾಲೀಕನ ಮೇಲೆ ತಾರೆ, ಹತ್ತುಸಾವಿರ ರೂಪಾಯಿಗೆ ದಾವಾ ಹಾಕಿದಳು. ಮಾಲೀಕ ಕೋರ್ಟಿನಲ್ಲಿ ಉತ್ತರ ಕೊಡುತ್ತ, "ತಾರೆ ಆರೀತಿ ಉಡಿಗೆ ಹಾಕಿಕೊಂಡಿದ್ದರಿಂದ ಸಿಂಹಕ್ಕೆ ಉದ್ರೇಕವಾಯಿತೆಂದೂ, ಅದು ಕಚ್ಚಿತೆಂದೂ ತಿಳಿಸಿದ. ಮತ್ತು ಈ ಕಾರಣದಿಂದ ಸಿಂಹಕ್ಕೆ, ತಾರೆಯಲ್ಲಿದ್ದ ಮೇಹರೋಗ ತಗುಲಿ ಅದರ ಹಲ್ಲುಗಳು ಮತ್ತು ಮೀಸೆ ಉದುರಿಹೋಗಿವೆಯೆಂದೂ, ಸಿಂಹವು ಅನುಪಯುಕ್ತವಾಗಿದೆಯೆಂದೂ, ಇದಕ್ಕಾಗಿ ತನಗೆ ಪರಿಹಾರ ಕೊಡಬೇಕೆಂದೂ ತಿಳಿಸಿದ

* * *

ಪೋಲೀಸಿನವರ ಮೇಲೆ ಬಾಂಬು ಎಸೆಯುವುದು ಕ್ರಾಂತಿಯಲ್ಲ — ಗೃಹಸಚಿವರು

—ಹಾಗಾದರೆ ಯಾರಮೇಲೆ ಎಸೆಯಬೇಕು ?

* * *

ಜನಗಳಿಗೆ ಪುಸ್ತಕಗಳನ್ನು ಓದುವುದರಲ್ಲಿ ಆಸಕ್ತಿ ದಿನದಿನಕ್ಕೆ ಹೆಚ್ಚುತ್ತಿದೆ. (ಸಾಹಿತಿಯೊಬ್ಬರ ಭಾಷಣದಲ್ಲಿ)

—ಹೌದು. ಬಿಟ್ಟಿ ಪುಸ್ತಕಗಳನ್ನು.

* * *

ಸಂಘದ ಜನರಲ್ ಬಾಡಿಗೆ ಮೀಟಿಂಗ್ ನಿನ್ನೆ ನಡೆಯಿತು. (ಪತ್ರಿಕೆಯಲ್ಲಿ ಮುದ್ರಾರಾಕ್ಷಸನ ಹಾವಳಿ)

—ಹೌದು ಅನೇಕ ಸಭೆಗಳು ಬಾಡಿಗೆ ಸಭೆಗಳೇ ಆಗಿರುತ್ತವೆ.

* * *

ನಮ್ಮ ತರುಣ ಕವಿಗಳಿಗೆ ಯಾರಿಗೂ ಬರದೆ ಇರುವಷ್ಟು ಟಪಾಲು ಬರುತ್ತಿದೆಯಂತೆ.

—ಹೌದು, ಅವರು ಬರೆದಿರುವ ಕವಿತೆಗಳೆಲ್ಲ ಪತ್ರಿಕಾ ಕಚೇರಿಗಳಿಂದ ವಾಪಸು ಬರುತ್ತಿರುವುದೇ ಇದಕ್ಕೆ ಕಾರಣವೆಂದು ಈಗ ತಿಳಿದುಬಂದಿದೆ.

* * *

ಕಾರೊಂದು ಮುದುಕಿಗೆ ಡಿಕ್ಕಿ ಹೊಡೆದುದರ ಪರಿಣಾಮವಾಗಿ ಮುದುಕಿಯನ್ನು ಆಸ್ಪತ್ರೆಗೆ ಸೇರಿಸಲಾಗಿದೆ. ಕಾರು ಯಾರದೆಂಬುದು ಪತ್ತೆಯಾಗಿಲ್ಲ.

—ಆದರಂತೆಯೇ ಮುದುಕಿಯೂ ಸಹ!

* * *

ಮೊನ್ನೆ ಸಂಗೀತ ಕಚೇರಿಯೊಂದರಲ್ಲಿ ಹಾರ್ಮೋನಿಯಂ ವಾದ್ಯಗಾರರಿಗೆ ಮನೆಗಳೇ ಸಿಕ್ಕಲಿಲ್ಲವಂತೆ

—ಮನೆಗಳ ಅಭಾವಕ್ಕೆ ಇದೊಂದು ನಿದರ್ಶನ.

* * *

ನಿನ್ನ ಹೆಂಡತಿಯನ್ನು ವಿಶ್ರಾಂತಿಗೆಂದು ತವರು ಮನೆಗೆ ಕಳುಹಿಸಿದ್ದು ನಿನ್ನ ದಯಾರ್ದ್ರಹೃದಯಕ್ಕೆ ಸಾಕ್ಷಿಯಾಗಿದೆ.'

—'ಹೌದು ನನಗೆ ವಿಶ್ರಾಂತಿ ಬೇಕಾಗಿತ್ತು.'

"ನಮ್ಮ ಮನೆಗೆ ಒಬ್ಬಳು ಒಳ್ಳೆಯ ಮೊಸರು ತಂದುಕೊಡುತ್ತಾಳೆ. ಚಾಕುವಿನಿಂದ ಕುಯ್ಯುವಹಾಗಿರುತ್ತದೆ."

"ಹೌದು"

"ಹೌದು, ಮೊಸರಿನಾಕೆಯನ್ನು ಚಾಕುವಿನಿಂದ ಕುಯ್ಯುವಹಾಗಿರುತ್ತದೆ."

* * *

ಆಗಾಖಾನರು ವಜ್ರ ತುಲಾಭಾರ ತೂಗಿಸಿಕೊಂಡಾಗ ನಾಡಿಗೇರರು ಸರ್ವೆಸೌದೆ ತುಲಾಭಾರವನ್ನು ತೂಗಿಸಿಕೊಂಡು ಅದನ್ನು ದಾನಮಾಡಿದರು.

* * *

ಮಧ್ಯಪ್ರದೇಶದ ಉಪಾಧ್ಯಾಯರು ಮಕ್ಕಳ ಹರಕಲು ಚಡ್ಡಿ ಬನೀನುಗಳನ್ನು ರಿಪೇರಿ ಮಾಡಬೇಕೆಂದು ಸರ್ಕಾರಿ ಆಜ್ಞೆ ಆಗಿದೆ.

—ಹರಕಲು ಚಡ್ಡಿ, ಬನೀನುಗಳನ್ನು ರಿಪೇರಿ ಮಾಡಲು ಶಿಕ್ಷಣ ಶಿಬಿರವನ್ನು ಮಧ್ಯಪ್ರದೇಶದ ಶಿಕ್ಷಣ ಮಂತ್ರಿಗಳು ಕ್ಷಿಪ್ರದಲ್ಲಿಯೇ ಆರಂಭಿಸಬಹುದೆಂದೂ ಹೇಳಲಾಗಿದೆ.

* * *

ನಾಯಿಯನ್ನು ಪಳಗಿಸುವನೊಬ್ಬ ಒಂದು ನಾಯಿಯನ್ನು ಸರ್ಕಸ್ ಕಂಪನಿಯ ಮಾಲೀಕನಿಗೆ ತೋರಿಸಿ "ಈ ನಾಯಿ ಪಿಟೀಲು ಬಾರಿಸುತ್ತೆ" ಎಂದು ಹೇಳಿದ. "ಎಲ್ಲಿ ನೋಡೋಣ" ಎಂದು ಸರ್ಕಸ್ ಮ್ಯಾನೇಜರ್ ಹೇಳಿದ.

ನಾಯಿಯು ಲಕ್ಷಣವಾಗಿ ತ್ಯಾಗರಾಜ ಕೃತಿಯೊಂದನ್ನು ಸುಶ್ರಾವ್ಯವಾಗಿ ಬಾರಿಸಿತು. ಸರ್ಕಸ್ ಮ್ಯಾನೇಜರ್ ಆಕಳಿಸುತ್ತ "ಶಾಸ್ತ್ರೀಯ ಸಂಗೀತ ಯಾರಿಗೆ ಬೇಕು! ಏನೋ ಒಂದೆರಡು ಫಿಲ್ಮ್ ಹಾಡುಗಳನ್ನು ಬಾರಿಸಲು ಬಂದಿದ್ದರೆ ಚೆನ್ನಾಗಿತ್ತು" ಎಂದು ಹೇಳಿದ.

"ಒಂದು ಸಿಗರೇಟ್ ಕೊಡಯ್ಯ"

"ನೀನು ಸಿಗರೇಟ್ ಸೇದುವುದನ್ನು ಬಿಟ್ಟಿದ್ದೀಯ ಎಂದು ಯಾರೋ ಹೇಳಿದರು"

"ಹೌದು, ಆದರೆ ನಾನಿನ್ನೂ ಮೊದಲ ಘಟ್ಟದಲ್ಲಿದ್ದೇನೆ. 'ಈಗ ನಾನು ದುಡ್ಡು ಕೊಟ್ಟು ಕೊಳ್ಳುತ್ತಿಲ್ಲ."

*  *  *

ದೇಶದ ಕೆಲವು ಭಾಗಗಳಲ್ಲಿ ಮಳೆ ಆಗದಿರುವುದಕ್ಕೆ ಕಮ್ಯೂನಿಸ್ಟರ ಕೈವಾಡವೇ ಕಾರಣವೆಂದು ಹೇಳಲಾಗಿದೆ.

*  *  *

ಹೋಟಲೊಂದರಲ್ಲಿ ಮಾಡಿದ ಚಪಾತಿಗಳಿಂದ ತಯಾರಿಸಿದ ಚಪ್ಪಲಿಗಳು ತಾಳಿಕೆಯಲ್ಲಿ ಕ್ರೇಪ್ ಸೋಲ್ ಚಪ್ಪಲಿಗಳನ್ನು ಮೀರಿಸಿವೆಯಂತೆ.

*  *  *

ಸ್ನೇಹಿತ : (ಹೆಂಡತಿ ಭಕ್ತನಿಗೆ) ನಿನಗೆ ನಾಚಿಕೆ ಆಗುವದಿಲ್ಲವೇ? ನಿನ್ನ ಪಂಚೆಯನ್ನು ನೀನೇ ಹೊಲಿದುಕೊಳ್ಳಬೇಕೇನು ? ನಿನ್ನ ಹೆಂಡತಿಯಿಂದ ಹೊಲಿಸಬಾರದೆ ?

ಹೆಂಡತಿ ಭಕ್ತ:— ನನ್ನ ಪಂಚೆಯನ್ನು ನಾನು ಹೊಲಿದುಕೊಳ್ಳುತ್ತಿರಲಿಲ್ಲ

ಸ್ನೇಹಿತ·— ಇವೊತ್ತು ಬೆಳಿಗ್ಗೆ ಕಿಟಕಿಯ ಹತ್ತಿರ ನೀನು ಹೊಲಿಯುತ್ತಾ ಇದ್ದುದನ್ನು ನಾನು ನೋಡಿದೆ

ಹೆಂಡತಿ ಭಕ್ತ:— ಅದು ನನ್ನ ಪಂಚೆಯಲ್ಲ, ನನ್ನ ಹೆಂಡತಿಯ ಸೀರೆ

## ನೀತಿಯು ಕಥೆ

ಒಂದು ದೊಡ್ಡ ಮಹಡಿ ಮನೆಗೆ ಬೆಂಕಿಬಿತ್ತು. ಮೇಲಂತಸ್ತಿನಲ್ಲಿ ಯಜಮಾನನ ಅವಿವಾಹಿತ ಮತ್ತು ಏಕಮಾತ್ರ ಪುತ್ರಿಯಿದ್ದಳು. ಬೆಂಕಿಯು ಭೋರ್ಗರೆಯುತ್ತ ಮನೆಯನ್ನೆಲ್ಲಾ ಆವರಿಸಿತು. ಮನೆಯವರೆಲ್ಲ ಕೆಳಗಡೆ ಇದ್ದುದರಿಂದ ಹೇಗೋ ಪಾರಾದರು. ಆದರೆ ಮಹಡಿಯ ಮೇಲಿದ್ದ ಹುಡುಗಿ ಚೀರುತ್ತ ಅಲ್ಲಿಯೇ ಇದ್ದಳು. ಅವಳನ್ನು ರಕ್ಷಿಸಲು ಯಾರೂ ಮುಂದೆ ಬರಲಿಲ್ಲ. ಅಷ್ಟರಲ್ಲಿ ಒಬ್ಬ ಸಾಹಸೀ ಯುವಕ ಬೆಂಕಿಯೊಳಗೆ ನುಗ್ಗಿ ಮಹಡಿ ಹತ್ತಿ ಹುಡುಗಿಯನ್ನು ಎತ್ತಿಕೊಂಡು ಕೆಳಕ್ಕೆ ಸುರಕ್ಷಿತವಾಗಿ ಬಂದನು. ಮನೆಯ ಯಜಮಾನ ಯುವಕನ ಸಾಹಸಕ್ಕೆ ಮೆಚ್ಚಿ ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು.

**ನೀತಿ** : ನಮಗೆ ಸಂಬಂಧವಿಲ್ಲದ ವಿಷಯದಲ್ಲಿ ತಲೆ ಹಾಕಿದರೆ ಕೇಡು ಖಂಡಿತ ತಪ್ಪದು.

* * *

 **ಕಳೆದು ಹೋಗಿದೆ** 

ನಮ್ಮೂರ ದೊಡ್ಡ ಮನುಷ್ಯರೊಬ್ಬರ ಮರ್ಯಾದೆ ಹೋಗಿದೆ. ಅದನ್ನು ದೊರಕಿಸಿ ಕೊಟ್ಟವರಿಗೆ ಹೇರಳವಾದ ಬಹುಮಾನ ಕೊಡಲಾಗುವುದು.

ದೇಶದಲ್ಲಿ ಪ್ರಜಾಸಂಖ್ಯೆ ಹೆಚ್ಚಾಗುತ್ತಿರುವುದರಿಂದ ಆಹಾರಾಭಾವಕ್ಕೆ ಕಾರಣವಾಗಿವೆಯೆಂದೂ, ಈ ಕಾರಣದಿಂದ ಪ್ರಜಾಸಂಖ್ಯೆ ಹೆಚ್ಚಾಗದಂತೆ ಏನಾದರೂ ಉಪಾಯ ಕೈಕೊಳ್ಳಬೇಕೆಂದೂ ಡೊಮಿನಿಯನ್ ಪಾರ್ಲಿಮೆಂಟಿನಲ್ಲಿ ಸದಸ್ಯರೊಬ್ಬರು ಸೂಚಿಸಿದರು.

—ಸರ್ಕಾರದವರು ಈಗ ಎಲ್ಲದರ ಮೇಲೂ ಕಂಟ್ರೋಲ್ ಹಾಕಿದ್ದಾರೆ ಮಕ್ಕಳನ್ನು ಮಿತಿಯಲ್ಲಿ ಪಡೆಯುವಂತೆ ಕಂಟ್ರೋಲ್ ಹಾಕಿದರೆ ಅನುಕೂಲ

*  *  *

ವಕೀಲ: [ಪಾಟಿಸವಾಲು ಮಾಡುತ್ತ] ನಿನಗೆ ಮದುವೆ ಆಗಿದೆಯೆ ?

ಸಾಕ್ಷಿ: ಆಗಿದೆ

ವಕೀಲ: ಯಾರನ್ನು ಮದುವೆ ಆಗಿದ್ದೀಯ ?

ಸಾಕ್ಷಿ: ಹೆಂಗಸನ್ನ.

ವಕೀಲ: ಯಾರಾದರೂ ಗಂಡಸನ್ನ ಮದುವೆಯಾಗುವುದು ಉಂಟೆ ?

ಸಾಕ್ಷಿ: ನನ್ನ ತಂಗಿ ಗಂಡಸನ್ನ ಮದುವೆಯಾಗಿದ್ದಾಳೆ

*  *  *

ಅದೊಂದು ಸಾವಿನ ದೃಶ್ಯ. ನಾಯಕನ ಅಭಿನಯ ಡೈರೆಕ್ಟರಿಗೆ ತೃಪ್ತಿಯನ್ನುಂಟುಮಾಡಲಿಲ್ಲ.

"ಬಾ, ಬಾ, ನಿನ್ನ ಸಾವಿನ ಅಭಿನಯದಲ್ಲಿ ಇನ್ನೂ ಸ್ವಲ್ಪ ಜೀವ ತುಂಬು" ಎಂತ ಡೈರೆಕ್ಟರ್ ನಾಯಕನಿಗೆ ಹೇಳಿದ.

*  *  *

"ನಾನು ಈಗ ಭಾಷಣ ಮಾಡಬೇಕೆಂದಿದ್ದೇನೆ ಯಾವ ವಿಷಯ ಮಾತನಾಡಲಿ"

"ಎರಡು ನಿಮಿಷ"

ಕೆಲವು ದಿನಗಳಿಂದ ಸರಿಯಾಗಿ ಕೆಲಸ ಮಾಡದೆ ಇದ್ದ ಕರ್ನಾಟಕ ಸಂಘವು ಮತ್ತೆ ಕೆಲಸ ಮಾಡಲಾರಂಭಿಸಿದೆ ಮೊನ್ನೆ ಸಂಘದ ಆಶ್ರಯದಲ್ಲಿ ಕಾವ್ಯವಾಚನ, ಭಾರತ ಪಠನ ಮತ್ತು ಭಾಷಣಗಳಾದವು

—ಹಾಗಾದರೆ ಸಂಘದ ಕೆಲಸ ಕಾರ್ಯಗಳು ನಿಲ್ಲುವುದು ಖಂಡಿತ.

* * *

ಬಹುಮಾನಗಳನ್ನು ಹಂಚಬೇಕೆ, ಬೇಡವೆ ಎಂಬ ವಿಚಾರದಲ್ಲಿ ಮೈಸೂರು ಶಾಸನಸಭೆಯಲ್ಲಿ ಬಿಸಿ ಬಿಸಿ ಚರ್ಚೆ ನಡೆಯಿತು

—ಬಿರುದು ಬಾವಲಿಗಳಿಲ್ಲದಿದ್ದರೆ ಆಸ್ಪತ್ರೆ, ಧರ್ಮಛತ್ರಗಳನ್ನು ಯಾರು ಕಟ್ಟಿಸುತ್ತಾರೆ ಸ್ವಾಮೀ

* * *

ಮೊನ್ನೆ ಈ ಊರಿನ ಪೇಟೆಯಲ್ಲಿ ಎರಡು ಹುಲಿಗಳು ಬಂದಿದ್ದವು.

—ನಮಗೆ ಗೊತ್ತಿದೆ ಅವು ಮೊಹರಂ ಹುಲಿಗಳು ಅಂತ !

* * *

ಬೆರಕೆ ತುಪ್ಪದ ಬಗ್ಗೆ ಪರಿಶೀಲನೆ ನಡೆಸಲು ಸಮಿತಿಯೊಂದು ನಿಯಾಮಕವಾಗಲಿದೆಯಂತೆ

—ಸಮಿತಿ ಸದಸ್ಯರಿಗೆ ಹಿತಸಾಧಕರು ಬೆಣ್ಣೆ ಹಚ್ಚದಂತೆ ನೋಡಿಕೊಳ್ಳಬೇಕು

* * *

ತುಮಕೂರು ತಾಲ್ಲೂಕು ಕೆಸ್ತೂರು ಗ್ರಾಮದಲ್ಲಿ ಒಂದು ವಿಚಿತ್ರ ಕರು ಜನನವಾಗಿದೆಯಂತೆ. ಇದಕ್ಕೆ ಒಂದೇ ಶರೀರ, ಎರಡು ತಲೆ, ನಾಲ್ಕು ಕಣ್ಣು, ನಾಲ್ಕು ಕಿವಿ ಇದ್ದವಂತೆ.

—ಇದರ ಜಾತಕ ನೋಡಿದ ಜ್ಯೋತಿಷ್ಕರು, ಇದಕ್ಕೆ ಮಂತ್ರಿಯಾಗುವ ಎಲ್ಲ ಲಕ್ಷಣಗಳೂ ಇವೆಯೆಂದು ಹೇಳಿದರಂತೆ.

ಶ್ರೀ ನಾಡಿಗೇರರು ಈ ಬಾರಿಯ ಚುನಾವಣೆಗೆ ಅಸ್ಪತ್ರೆ ಪಾರ್ಟಿಸಿಂದ ನಿಲ್ಲುತ್ತಾರೆಂಬುದು ಶುದ್ಧ ಸುಳ್ಳು.

*　　　*　　　*

ಸೋಷಲಿಸ್ಟರು ಅಧಿಕಾರಕ್ಕೆ ಬಂದರೆ...........

[ಪತ್ರಿಕೆಯೊಂದರ ತಲೆ ಬರಹ]

—ನಮ್ಮ ನಾಗತ್ತೆಗೆ ಮೀಸೆ ಬಂದರೆ ... ....

[ಕೈಲಾಸಂ ಕ್ಷಮೆ ಕೋರಿ]

*　　　*　　　*

ಬಿ. ಎ. ಪರೀಕ್ಷೆಗೆ ಕುಳಿತಿದ್ದ ವಿದ್ಯಾರ್ಥಿಯೊಬ್ಬನು ಹೊರಗಿನಿಂದ ಉತ್ತರಗಳನ್ನು ತರಿಸಿಕೊಳ್ಳುತ್ತಿದ್ದನೆಂದು ದಸ್ತಗಿರಿ ಮಾಡಲ್ಪಟ್ಟಿದ್ದಾನೆ.

—ಮನುಷ್ಯ ಸ್ವಾವಲಂಬಿಯಾಗಿರಬೇಕು ಎಂಬುದಕ್ಕೆ ಇದೇ ಉದಾಹರಣೆ.

*　　　*　　　*

"ನೀನು ಒಬ್ಬನೇ ಕಳ್ಳತನ ಮಾಡಿದೆಯೇನಯ್ಯ ?"

"ಹೌದು ಮಹಾಸ್ವಾಮಿ, ಈಗಿನ ಕಾಲದಲ್ಲಿ ಯಾರನ್ನೂ ನಂಬುವುದಕ್ಕೆ ಆಗುವುದಿಲ್ಲ.

*　　　*　　　*

ಮೊದಲಿನ ಕಾಲಕ್ಕೆ ಹಣ ಕೂಡಿಡುವವರನ್ನು ಜಿಪುಣರೆಂದು ಕರೆಯುತ್ತಿದ್ದರು. ಈಗ ಅವರನ್ನು ಯಕ್ಷಿಣಿವಿದ್ಯಪ್ರವೀಣರೆಂದು ಕರೆಯುತ್ತಾರೆ.

*　　　*　　　*

ಸಕ್ಕರೆ ಅಭಾವ ಇದ್ದಾಕ್ಷಣಕ್ಕೆ ಜನಗಳಿಗೆ ಅದರಿಂದ ಅಷ್ಟೇನೂ ತೊಂದರೆಯಾಗಲಾರದು. ಸಕ್ಕರೆ ಇಲ್ಲದೆ ಕಾಲ ಹಾಕಲು ಅಷ್ಟೇನೂ ಕಷ್ಟವಲ್ಲ—ಶ್ರೀ ಪುರುಷೋತ್ತಮದಾಸ್ ತಾಂಡನ್.

—ಹೌದು, ಸಿಹಿ ಮೂತ್ರರೋಗ ಇರುವವರಿಗೆ ಸಹ ಸಕ್ಕರೆ ಬೇಕಿಲ್ಲ.

## ಸೋಡ ಚೀಟಿ ನೋಟೀಸು

ಕೆ. ಪಿ. ಸಿ. ಸಿ. ತಂದೆ ಅ. ಬಾ. ಕಾಂ. ಮುಕ್ಕಾಮು ಧಾರವಾಡ ಈತನಿಗೆ, ನಿನ್ನ ಲಗ್ನದ ಹೆಂಡತಿಯಾದ ಮೈಸೂರು ಕಾಂಗ್ರೆಸ್ ಈ ಮೂಲಕ ಸೋಡ ಚೀಟಿ ನೋಟೀಸ್ ಕೊಡುವದೇನಂದರೆ:

ನೀನು ನನ್ನ ಲಗ್ನದ ಗಂಡನಿದ್ದು ಕಳೆದ ಕೆಲವು ವರ್ಷಗಳಿಂದ ಸುರಳಿತ ಬಾಳ್ವೆ ನಡೆಸಿದಿ. ಐಲಿ ಕಡಿಗೆ ನೀನು ದುರ್ವ್ಯಸನಕ್ಕೆ ಬಿದ್ದು ನನ್ನನ್ನು ಹೊಡೆದು ಬಡಿದು ತ್ರಾಸ ಕೊಟ್ಟಿರುತ್ತೀ. ಮತ್ತು ಈಗ್ಗೆ ಮೂರು ವರ್ಷಗಳ ಹಿಂದೆ ಉಟ್ಟ ಸೀರೀಮ್ಯಾಲೆ ನನ್ನನ್ನು ತವರುಮನೆಗೆ ಕಳಿಸಿರುತ್ತೀ. ನನ್ನನ್ನು ಕರಕೊಂಡು ಹೋಗಿ ಸುರಳಿತ ಬಾಳ್ವೆ ಮಾಡಲು ನಾನು ಪಂಚಾಯಿತಿದಾರರಿಂದ ಹೇಳಿಸಿದೆ, ನೀನು ಕೇಳಲಿಲ್ಲ. ಅದಕ್ಕಾಗಿ ನಾನು ಬ್ಯಾರೆ ಉಡುಕಿ ಮಾಡಿಕೊಳ್ಳಲು ನಿಶ್ಚೈಸಿದ್ದೇನೆ. ನನ್ನ ಮೇಲೆ ವ ನನ್ನ ಉಡುಕಿ ಗಂಡನ ಮೇಲೆ ನಿನ್ನದು ಏನೂ ನಡಿಯಲಿಕ್ಕಿಲ್ಲ, ಎಂದು ತಿಳಿಸುವ ಸೋಡಚೀಟಿ ನೋಟೀಸ.

× ಈ ಎಡಗೈ ಹೆಬ್ಬೆಟ್ಟಿನ ಗುರ್ತು ಮೈಸೂರು ಕಾಂಗ್ರೆಸ್
ಗಂಡ ಕೆ. ಪಿ. ಸಿ. ಸಿ. ಈಕೀದು ಅದೆ.

* * *

"ನಮ್ಮಿಬ್ಬರ ಸ್ನೇಹ ಎಂಥಾದ್ದು ಅಂತೀರ, ಇಬ್ಬರೂ ಒಂದೇ ತಟ್ಟೆಯಲ್ಲಿ ಊಟಮಾಡುತ್ತಿದ್ದೆವು."

"ಇನ್ನೊಂದು ತಟ್ಟೆಗೆ ಗತಿ ಇರಲಿಲ್ಲ ಅಂತ ಕಾಣುತ್ತೆ."

* * *

ದಾಂಪತ್ಯ ವಿಚ್ಛೇದನಗಳು ಮದುವೆಯಷ್ಟೇ ಸುಲಭವಾಗಬೇಕು.

* * *

## ಊರೂರಿನ ಸುದ್ದಿ ಪತ್ರಗಳಿಂದ

ಮೋಟಾರು ಅಪಘಾತಕ್ಕೀಡಾಯಿತು. ಕೇವಲ ಮೂರು ಜನ ಸತ್ತರೆಂದು ತಿಳಿಸಲು ವಿಷಾದಿಸುತ್ತೇವೆ.

—ಹಾಗಾದರೆ ಎಷ್ಟು ಜನ ಸತ್ತಿದ್ದರೆ ಈ ಸುದ್ದಿಗಾರನಿಗೆ ತೃಪ್ತಿಯಾಗುತ್ತಿತ್ತು.

*　　　*　　　*

ಮೋಟಾರು ಅಪಘಾತಕ್ಕೀಡಾಗಿ ಇಬ್ಬರು ಸತ್ತು ಮೂರು ಜನರಿಗೆ ಗಾಯವಾಯಿತು. ಮೋಟಾರಿಗೆ ಯಾವ ಹಾನಿಯೂ ತಟ್ಟಲಿಲ್ಲವೆಂಬುದು ಸಂತೋಷದ ಸಮಾಚಾರ.

—ಹೌದು, ಈಗಿನ ಕಾಲದಲ್ಲಿ ಮನುಷ್ಯರಿಗೆ ಬೆಲೆಯಿಲ್ಲ. ಹತ್ತು ಹನ್ನೆರಡು ಸಾವಿರ ರೂಪಾಯಿನ ಮೋಟಾರಿಗೆ ಜಖಂ ಆಗದಿದ್ದದ್ದು ನಿಜಕ್ಕೂ ಸಂತೋಷಪಡತಕ್ಕ ವಿಷಯ.

*　　　*　　　*

....ರವರು ತಮ್ಮ ೯೧ನೇ ವಯಸ್ಸಿನಲ್ಲಿ ನಿಧನರಾದರು. ಮೃತರು ೨ ವರ್ಷಗಳಿಂದ ಉಬ್ಬಸ ರೋಗದಿಂದ ನರಳುತ್ತಿದ್ದರು. ಮೃತರ ನಿಧನದ ಶೋಕವನ್ನು ಭರಿಸಲು ಅವರ ಬಂಧು ಮಿತ್ರರಿಗೆ ಶಕ್ತಿ ಸಾಮರ್ಥ್ಯಗಳನ್ನೀಯಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

—ಈ ೯೧ ವರ್ಷ ವಯಸ್ಸಿನ ಉಬ್ಬಸ ರೋಗದ ಮುದುಕ ಗೊಟಕ್ ಅನ್ನಲೆಂದು ಮನೆಯವರೇ ಅಲ್ಲದೆ ನೆರೆಹೊರೆಯವರು ಸಹ ಹಲವು ದೇವರಿಗೆ ಹರಕೆ ಹೊತ್ತಿದ್ದರು. ಇವನು ಸತ್ತಿದ್ದರಿಂದ ಮನೆಯವರಿಗೆ ಸಂತೋಷವೇ ವಿನಾ ದುಃಖವಿಲ್ಲ.

*　　　*　　　*

ಶ್ರೀ ಶಂಕರದಾಸಯ್ಯನವರು ತಮ್ಮ ೭೫ನೇ ವಯಸ್ಸಿನಲ್ಲಿ ನಿಧನ ರಾದರು ಇವರ ನಿಧನದ ಸಂತೋಷ ಸೂಚಿಸಲು ಶಾಲಾ ಬಾಲಕ ಬಾಲಕಿ ಯರಿಗೆ ಸಿಹಿ ತಿಂಡಿ ಹಂಚಲಾಯಿತು

—ಟೀಕೆ ಅನವಶ್ಯಕ

* * *

ಬೊಂಬಾಯಿ ಪ್ರಾಂತ್ಯದಿಂದ ಮೈಸೂರು ಕಡೆಗೆ ಅನೇಕ ಜನ ವಲಸೆ ಬರಲಿದ್ದಾರೆಂದು ತಿಳಿದುಬಂದಿದೆ

—ಹೌದು, ಅಲ್ಲಿ ಪಾನನಿರೋಧ ಜಾರಿಗೆ ಬಂದದ್ದರಿಂದ ಇಲ್ಲಿಗೆ ಬರಬಹುದು.

* *

"ಮಂಗಯರ್ ಕರಸೀ"

—ಆಗಲಿ ಸ್ವಾಮಿ, ಮುಂದಿನ ವರ್ಷ ಅವರನ್ನೇ ಕರೆಯುತ್ತೇವೆ.

* * *

ಡಾಲರ್ ವಿನಿಮಯ ಮೌಲ್ಯ ಹೆಚ್ಚಿದರ ಪರಿಣಾಮ—

—ನಮ್ಮಲ್ಲಿ ಒಂದು ಅಮೇರಿಕನ್ ಗುಂಡು ಸೂಜಿ ಇದೆ. ಹೆಚ್ಚು ಬೆಲೆ ಕೊಡತಕ್ಕ ಟೆಂಡರಿಗೆ ಕೊಡುತ್ತೇವೆ.

* * *

ಭಾರತದ ಆನೆಗಳು ಬೇಕೆಂದು ವಿದೇಶಗಳವರು ಒಂದೇಸಮನೆ ಹೇಳು ತ್ತಿದ್ದಾರೆ

—ನಮ್ಮ ಸರ್ಕಾರದಲ್ಲಿರುವ ಬಿಳಿ ಆನೆಗಳನ್ನು ಸಾಗಹಾಕಿದರೆ ಎಲ್ಲರಿಗೂ ಕ್ಷೇಮವಾದೀತು

ಸಿನಿಮಾ ತಾರೆಯರಿಗೆ ಅಡ್ರೆಸ್ ಅರ್ಪಿಸುವ ರಹಸ್ಯ ಏನು ? (ವಾಚಕರೊಬ್ಬರ ಪ್ರಶ್ನೆ)

—ಸಾಮಾನ್ಯವಾಗಿ ತಾರೆಯರಿಗೆ ಅಡ್ರೆಸ್ಸೇ ಇರುವುದಿಲ್ಲ. ಹೋಟಲು, ಟಿ. ಬಿ, ಧರ್ಮಛತ್ರಗಳೇ ಅವರ ನಿವಾಸಸ್ಥಾನಗಳು. ಅದಕ್ಕಾಗಿ ಅವರಿಗೆ ಪರ್ಮನೆಂಟ್ ಅಡ್ರೆಸ್ ಇರಲೆಂದು, ಮಹಾಜನಗಳು ಅಡ್ರೆಸ್ ಅರ್ಪಿಸುತ್ತಾರೆ.

* * *

ಇನ್ನು ಮೇಲೆ ಮದುವೆಯಾಗುವ ಹುಡುಗಿಯರಿಗೆ ಉಡುಗೊರೆ ಕೊಡಬೇಕಾದರೆ ಬರೀ ಸೀರೆ, ಕುಪ್ಪಸ ಕೊಟ್ಟರೆ ಸಾಲದು. ಲಂಗ, ಚಡ್ಡಿ ಮತ್ತು ಬಾಡಿ ಇವಿಷ್ಟನ್ನೂ ಕೊಡಬೇಕು.

* * *

ನಾಲಿಗೆ ರುಚಿಯನ್ನು ಕಡಿಮೆ ಮಾಡಿಕೊಳ್ಳಬೇಕೆಂದು ಆಹಾರ ಸಚಿವರು ಹೇಳಿದ್ದಾರೆ.

—ಗೂರಲು ಅಜ್ಜನಿಗೆ ಮೊಮ್ಮಗ ಕೆಮ್ಮುವುದಕ್ಕೆ ಹೇಳಿಕೊಟ್ಟಂತಿದೆ ಈ ಮಾತು. ನಾಲಿಗೆ ರುಚಿಯನ್ನು ನಾವು ಕಳೆದುಕೊಂಡು ಅದೆಷ್ಟೋ ವರ್ಷಗಳಾದವು. ಸಚಿವರು ನಮ್ಮನ್ನು ಅಣಕಿಸಲು ಈ ಮಾತನ್ನು ಹೇಳಿದಂತಿದೆ.

* * *

ಹಸಿವಿನಿಂದ ಯಾರೂ ಸತ್ತಿಲ್ಲ, ಎಂಬುದಾಗಿ ಮುಂಬೈ ಪ್ರಾಂತದ ಆಹಾರ ಸಚಿವರು ಹೇಳಿಕೆ ಕೊಟ್ಟಿದ್ದಾರೆ.

—ನಿಜ, ಆಯಸ್ಸು ತೀರಿದ್ದರಿಂದ ಅವರೆಲ್ಲ ಸತ್ತಿದ್ದಾರೆ.

* * *

"ಏಳೈ ಪಡುಂ ಪಾಡು"—

—ನೀನು ಪಡುವ ಪಾಡು ಇದ್ದೇ ಇದೆ. ಏಳಯ್ಯ, ಯಾಕೆ ತಲೆಯ ಮೇಲೆ ಕೈ ಹೊತ್ತುಕೊಂಡು ಕೂತಿದ್ದೀಯ.

## ಸುಬ್ಬರಾಯನ ಪಡಿಪಾಟ

ಸುಬ್ಬರಾಯ ಅತ್ತೇಮನೆಗೆ ಹೋಗಲೇಬೇಕಾಗಿತ್ತು. ದೊರೆಯದ ರಜವನ್ನು ಸಾಹಸದಿಂದ ದೊರಕಿಸಿಕೊಂಡ. ಸೊಸೈಟಿ ಬಾಗಿಲು ಹಾಕಿದ್ದರೂ ಸೆಕ್ರೆಟರಿಯ ಮನೆಗೆ ಹೋಗಿ ಅವನ ಕಾಲಿಗೆ ಬಿದ್ದು ಹತ್ತು ರೂಪಾಯಿ ಸಾಲ ತೆಗೆದುಕೊಂಡ. ಅವನ ಸ್ನೇಹಿತ ರಾಮರಾಯನ ಇಸ್ತ್ರಿಯಾದ ಬಟ್ಟೆಗಳನ್ನು ಅಂಗಲಾಚಿ ತೆಗೆದುಕೊಂಡ. ಸೀಟಿಲ್ಲದ ಬಸ್ಸಿನಲ್ಲಿ ಕಂಡಕ್ಟರಿಗೆ ಸಲಾಮು ಹೊಡೆದು ನಾಷ್ಟಾಕ್ಕೆ ನಾಲ್ಕಾಣೆ ಕೊಟ್ಟು ಬಸ್ಸಿನಲ್ಲಿ ನಿಂತುಕೊಂಡು ಹದಿನೈದು ಮೈಲಿ ದೂರ ಇರುವ ಸರಗೂರಿಗೆ ಸಂಜೆಗೆ ಹೋದ. ಅತ್ತೇಮನೆ ತಲುಪಿದ. ಅವನ ಹೆಂಡತಿ ಅದೇ ಮಧ್ಯಾಹ್ನ ಬಹಿಷ್ಠೆಯಾದ ವಿಚಾರ ಕೇಳಿ ಮೂರ್ಛೆ ಹೋದ !

*　　　*　　　*

## ಹಾಗಾದರೆ ಅಲ್ಲಿ ಯಾರಿದ್ದಾರೆ ?

ಮಂಗೂಮಲ್ ಮಾರ್ವಾಡಿಗೆ ಅವಸಾನಕಾಲ ಪ್ರಾಪ್ತವಾಯಿತು. ಅವನ ಸುತ್ತ ಅವನ ಮಕ್ಕಳೆಲ್ಲ ನಿಂತಿದ್ದರು. ತಂದೆ ಕೊನೆಯ ಮಾತು ಏನು ಹೇಳುತ್ತಾನೋ ಅಂತ ಚಾತಕ ಪಕ್ಷಿಗಳಂತೆ ಕಾದಿದ್ದರು. ಮಾರ್ವಾಡಿ ಕೇಳಿದ "ಹರಕ್‌ಚಂದ್ ಎಲ್ಲಿದ್ದಾನೆ?" ತಲೆ ಬಳಿ ನಿಂತಿದ್ದ ಹಿರಿಯ ಮಗ ಹರಕ್‌ಚಂದ್ ಉತ್ತರ ಕೊಡುತ್ತ "ಇಲ್ಲಿದ್ದೇನೆ" ಅಂತ ಹೇಳಿದ ಮಾರ್ವಾಡಿ ತನ್ನ ನಾಲ್ಕು ಜನ ಮಕ್ಕಳ ಹೆಸರುಗಳನ್ನೂ ಹೇಳುತ್ತ ಅವರೆಲ್ಲಿ ಇದ್ದಾರೆಂದು ವಿಚಾರಿಸಿದ. ತಾವು ನಿಂತಿರುವ ಸ್ಥಳವನ್ನು ಹೇಳಿದರು

ಮಂಗೂಮಲ್ ನಿಟ್ಟುಸಿರುಬಿಡುತ್ತ "ಎಲ್ಲರೂ ಇಲ್ಲೇ ಬಂದು ನಿಂತರೆ ಅಂಗಡಿ ವ್ಯಾಪಾರ ಯಾರು ಮಾಡುತ್ತಾರೆ?" ಅಂತ ಹೇಳುತ್ತ ಕಣ್ಣು ಮುಚ್ಚಿದ.

ಬೀಡಿ ಎಂಬಲ್ಲಿನ ಡಾಕ್ಟರೊಬ್ಬರಲ್ಲಿ ಒಂದು ನಾಯಿ ಇದೆ. ಡಾಕ್ಟರರ ಗೆಳೆಯರು ಅದರ ಎದುರಿನಲ್ಲಿ ಹಾಡಿದರೆ, ನಾಯಿಯೂ ಹಾಡಲಾರಂಭಿಸುತ್ತದೆ. (ಸುದ್ದಿ)

—ಕೆಲವರು ಹಾಡಿದರೆ ನಾಯಿ ಬೊಗಳಿದಂತಿರುತ್ತದೆ.

*    *    *

"ಒಳಗೆ ಬಿಸಿ ಏನೇನಿದೆ"

"ಒಲೆ ಮತ್ತು ನಮ್ಮ ಮಾಲೀಕರು"

*    *    *

ಸಿಂಗಪುರದ ಅಡವಿ ಹುಡುಗಿಗಾಗಿ ಭಾರಿ ದೊಂಬಿಯಾಯಿತು.

—ಅಡವಿಯದಾದರೇನು, ಊರಿನದಾದರೇನು, ಹುಡುಗಿ ಹೌದೋ ಅಲ್ಲವೋ ?

*    *    *

ಮೊದಲಿನ ಕಾಲಕ್ಕೆ ಮದುವೆಗೆ ಮುಹೂರ್ತ ಇಡುವ ಸಮಯದಲ್ಲಿ ಇಬ್ಬರು ಬೀಗಿತ್ತಿಯರ ಹೆರಿಗೆ ದಿನಗಳನ್ನು ಲೆಕ್ಕ ಹಾಕುತ್ತಿದ್ದರು ಈಗ ಮದುವಣಗಿತ್ತಿಯ ಹೆರಿಗೆ ದಿನಗಳನ್ನೂ ಲೆಕ್ಕ ಹಾಕಬೇಕಾಗಿದೆ.

*    *    *

ಮೊನ್ನೆ ಈ ಊರಿನಲ್ಲಿ ಭಾರಿ ಜಾತ್ರೆ ನಡೆಯಿತು. ಉತ್ತಮ ರಾಸುಗಳಿಗೆ ಬಹುಮಾನ ಹಂಚಲಾಯಿತು. ಉನ್ನತಾಧಿಕಾರಿಗಳೂ, ಜನನಾಯಕರೂ ಆಗಮಿಸಿದ್ದರು. (ಪತ್ರಿಕೆಯಲ್ಲಿ ಸುದ್ದಿ)

—ಟೀಕೆ ಅನವಶ್ಯಕ.

*    *    *

ಸರಕಾರಿ ನೌಕರರು ಯಾವ ಅಡ್ಡಿ ಆತಂಕಗಳಿಗೂ ಹೆದರದೆ ಮುನ್ನುಗ್ಗಿ ಕೆಲಸ ಮಾಡಬೇಕು (ಪ್ರಧಾನಿ ನೆಹರೂ)

—ಪ್ರಾಂತೀಯ ಕಾಂಗ್ರೆಸ್ ನಾಯಕರನ್ನು ಅಷ್ಟು ಸುಲಭವಾಗಿ ತಳ್ಳಿಹಾಕುವುದಕ್ಕಾಗುತ್ತದೆಯೆ ?

ಶುಭಾಶುಭ ಕರ್ಮಗಳಲ್ಲೆಲ್ಲ ಇನ್ನು ಮುಂದೆ ಸಂಸ್ಕೃತದಲ್ಲಿ ಮಂತ್ರ ಹೇಳುವುದನ್ನು ಬಿಟ್ಟು ರಾಷ್ಟ್ರಭಾಷೆ ಹಿಂದಿಯಲ್ಲೇ ಹೇಳಬೇಕೆಂದು ರಾಷ್ಟ್ರಪತಿ ತಾಂಡನ್ನರು ಹೇಳಿದ್ದಾರೆ.

—ಸತ್ತವರಿಗೆ ತಿಥಿ ಮಾಡುವಾಗ ಸಂಸ್ಕೃತದಲ್ಲಿ ಮಂತ್ರ ಹೇಳಿದರೇನು, ಹಿಂದಿಯಲ್ಲಿ ಹೇಳಿದರೇನು ?

*   *   *

ಬೊಂಬಾಯಿಯ ಹಾಲು ಮಾರುವವರು ತಮ್ಮ ಡಬ್ಬಗಳಲ್ಲಿ ಹೆಂಡ ವನ್ನು ಸಾಗಿಸುತ್ತಿದ್ದರಂತೆ.

—ಹೌದು ಸ್ವಾಮೀ, ಅದೂ ಹಾಲು, ಈಚಲಮರದ ಹಾಲು.

*   *   *

ಏಕೀಕರಣ ಕನ್ನಡಿಗರ ಜೀವನ್ಮರಣ ಹೋರಾಟ, ಎಂದು ನಾಯಕರ ಅಪಲಾಪ

—ಸಾರಾಂಶ, ನಾವು ಸಾಯುವವರೆಗೂ ಈ ಹೋರಾಟ ನಡೆಸಬೇಕು.

*   *   *

೧೯೫೩ರ ಅಂತ್ಯದೊಳಗಾಗಿ ಭಾರತ ವಿದೇಶೀ ಅನ್ನ ಋಣದಿಂದ ಮುಕ್ತ ವಾಗುವುದು—ಡಾ॥ ರಾಜೇಂದ್ರಪ್ರಸಾದರು.

—ಪರಾನ್ನಂ ದುರ್ಲಭಂ ಎಂಬ ಆರ್ಯೋಕ್ತಿ ಅಧ್ಯಕ್ಷರಿಗೆ ತಿಳಿದಿಲ್ಲ ವೇನೋ ?

*   *   *

ಕುರುಡರು ನೋಡಲು ಸಾಧ್ಯವಾಗುವಂಥ ಯಂತ್ರವೊಂದು ತಯಾ ರಾಗಲಿದೆಯೆಂದು ಬ್ರಿಸ್ಟಲ್ ವಿಶ್ವವಿದ್ಯಾನಿಲಯದ ಪ್ರೊ. ಡಿ. ಫ್ಲೆಚರ್ ಹೇಳಿದ್ದಾರೆ.

—ನಮ್ಮ ರಾಜಕಾರಣಿಗಳಿಗೆ ಇಂಥ ಯಂತ್ರಗಳನ್ನು ತರಿಸಿಕೊಟ್ಟರೆ ಅನುಕೂಲ.

ಇಂಡಿಯಾ ಸರ್ಕಾರದ ಆಹಾರ ಸಚಿವರಾದ ಶ್ರೀ ಕೆ. ಎಂ. ಮುನ್ಷಿಯವರು ತಮ್ಮ ಪತ್ನಿ ಶ್ರೀಮತಿ ಲೀಲಾವತಿ ಮುನ್ಷಿಯವರನ್ನು ತಮ್ಮ ಆಪ್ತ ಕಾರ್ಯದರ್ಶಿಗಳನ್ನಾಗಿ ಮಾಡಿಕೊಂಡಿದ್ದಾರೆ. ಶ್ರೀಮತಿಯವರು ಸಂಚಾರ ಭತ್ಯವನ್ನಲ್ಲದೆ, ಬೇರಾವ ಸಂಭಾವನೆಯನ್ನೂ ತೆಗೆದುಕೊಳ್ಳುವುದಿಲ್ಲವಂತೆ.

—ನಮ್ಮ ಮನೆಯಲ್ಲಿ ಹೀಗಲ್ಲ. ನನ್ನ ಹೆಂಡತಿ ನನಗೆ ಆಪ್ತ ಕಾರ್ಯದರ್ಶಿಯಾದರೂ, ಜಟಕಾ ಭತ್ಯ, ಸಿನಿಮಾ ಭತ್ಯ, ಸೀರೆ ಕುಪ್ಪಸಗಳ ಭತ್ಯ ಮುಂತಾದುವುಗಳನ್ನೆಲ್ಲ ವಸೂಲು ಮಾಡುತ್ತಾಳೆ.

*　　　*　　　*

ಮದ್ರಾಸಿನ ಅರಣ್ಯ ಸಂಪತ್ತನ್ನು ವೃದ್ಧಿಪಡಿಸುವ ಉದ್ದಿಶ್ಯದಿಂದ ಅಲ್ಲಿನ ಎಲ್ಲ ಖಾಸಗೀ ಅರಣ್ಯಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲು ನಿರ್ಧರಿಸಲಾಗಿದೆ.

—ಈ ಬಗ್ಗೆ ಖಾಸಗೀ ಮಾಲೀಕರು ಕೆಟ್ಟ ಕೂಗೆಬ್ಬಿಸಿದರೆ ಅದು ಅರಣ್ಯರೋದನವಾಗಬಹುದು.

*　　　*　　　*

ವಿಮಾನದಲ್ಲಿ ಯಾನ ಮಾಡುವ ಪ್ರಾಣಿಗಳ ಅನುಕೂಲಕ್ಕಾಗಿ ಲಂಡನ್ನಿನಲ್ಲಿ ಒಂದು ಹಾಸ್ಟೆಲ್ ಕಟ್ಟಲಾಗುವುದು. ಚಿಕ್ಕನಿಂದ ಆನೆಯವರೆಗೂ ಈ ಹಾಸ್ಟೆಲಿನಲ್ಲಿ ತಂಗಲು ಸ್ಥಳ ಏರ್ಪಡಿಸಲಾಗುವುದು.

—ಲಂಡನ್ನಿನಲ್ಲಿ ಪ್ರಾಣಿಗಳಿಗೂ ಒಂದು ಹಾಸ್ಟೆಲ್ ಕಟ್ಟಿಸಲಿದ್ದಾರೆ. ಆದರೆ ನಮ್ಮಲ್ಲಿನ ಥರ್ಡ್ ಕ್ಲಾಸ್ ವೇಟಿಂಗ್ ರೂಮುಗಳಲ್ಲಿ ಪ್ರಾಣಿಗಳು ತಂಗಲು ಸಹ ಹಿಂಜರಿಯುತ್ತವೆ.

*　　　*　　　*

✓ ಎರಡು ಕಾಲಿನ ಎಮ್ಮೆ ಕರುವೊಂದು ಸಿಲೋನಿನಲ್ಲಿ ಸಿಕ್ಕಿದೆಯಂತೆ (ಪತ್ರಿಕೆಯಲ್ಲಿ)

—ಅಯ್ಯೋ ನಮ್ಮ ಮನೇಲೇ ಇದೆ ಸ್ವಾಮೀ !

## ಸಹಾಯ ಬೇಕಿದ್ದರೆ ಕೊಡುತ್ತಿದ್ದೆ

"ನಿನ್ನ ಹೆಂಡತಿ ಅವನ ಜೊತೆ ಜಗಳವಾಡುತ್ತಿದ್ದಾಗ ಸುಮ್ಮನೆ ನಿಂತಿದ್ದಿಯಲ್ಲ, ಸಹಾಯಕ್ಕೆ ಹೋಗಬಾರದಿತ್ತೆ ?''

"ಅವನು ಸಹಾಯಕ್ಕೆ ಕರೆದಿದ್ದರೆ ಹೋಗುತ್ತಿದ್ದೆ. ಅವನು ಕರೆಯಲಿಲ್ಲ ನಾನೇನು ಮಾಡಲಿ ?"

* * *

## ಆಪಾದಿತನಿಗೆ ದೂರದೃಷ್ಟಿ ಇರಲಿಲ್ಲ

ಸ್ಥೂಲಕಾಯದ ತನ್ನ ಹೆಂಡತಿಯನ್ನು ಕಿಟಕಿಯಿಂದ ಆಚೆ ಎಸೆದನೆಂದು ಒಬ್ಬನ ಮೇಲೆ ಆಪಾದನೆ ಬಂದಿತ್ತು

ನ್ಯಾಯಾಧೀಶರು ಆಪಾದಿತನಿಗೆ ನೂರು ರೂಪಾಯಿ ಜುಲ್ಮಾನೆ ವಿಧಿಸಿದರು ಮತ್ತು ತೀರ್ಪಿನಲ್ಲಿ ಈರೀತಿ ಬರೆದಿದ್ದರು "ಆಪಾದಿತನು ತನ್ನ ಹೆಂಡತಿಯನ್ನು ಕಿಟಕಿಯಿಂದಾಚೆ ಎಸೆದದ್ದು ಶುದ್ಧ ತಪ್ಪು. ಇನ್ನೂರು ಪೌಂಡುಗಳ ತೂಕ ಇರುವ ಆ ಹೆಂಗಸು, ಕಿಟಕಿಯ ಹತ್ತಿರ ಓಡಿಯಾಡುತ್ತಿದ್ದ ಯಾರಮೇಲಾದರೂ ಬಿದ್ದಿದ್ದರೆ ತುಂಬಾ ಅಪಾಯವಾಗುತ್ತಿತ್ತು."

* * *

## ಪಾಕೆಟ್ ಪೆನ್ ಕಳೆದಿದೆ

ಹೊಸಾಹೊಸ ಪಾರ್ಕರ್ ಪೆನ್ ನಿನ್ನೆ ಮಾರ್ಕೆಟ್ ಚೌಕದ ಬಳಿ ಕಳೆಯಿತು. ತಂದು ಕೊಟ್ಟವರಿಗೆ ಐದು ರೂಪಾಯಿ ಬಹುಮಾನ ಕೊಡುತ್ತೇನೆ. ಬಾಕ್ಸ್ ನಂ. ೧೦೦ ದೈನಿಕ ಶಂಖ ಕಾರ್ಯಾಲಯ, ಬೆಂಗಳೂರು.

—ಈ ಪೆನ್ನನ್ನು ನನಗೆ ತಂದುಕೊಟ್ಟರೆ ನಾನು ಹತ್ತು ರೂಪಾಯಿ ಬಹುಮಾನ ಕೊಡುತ್ತೇನೆ.

* * *

## ಕಾರಣ ಅದಲ್ಲ

ಮಾರ್ವಾಡಿಯೊಬ್ಬನು ತನ್ನ ಹೆಂಡತಿ ಸಮೇತ "ದೇಶ"ಕ್ಕೆ ಹೊರಟನು. ಬರುತ್ತಾ ದಾರಿಯಲ್ಲಿ ಭಾರಿ ಸೇತುವೆ ಬಂದಿತು. ಮಾರ್ವಾಡಿಯ ಹೆಂಡತಿ ಸೇತುವೆ ಕೆಳಗೆ ಹರಿಯುತ್ತಿದ್ದ ನದಿಯನ್ನು ರೈಲ್ವೆ ಕಿಟಕಿಯಿಂದ ನೋಡುತ್ತಿದ್ದವಳು ಅಕಸ್ಮಾತ್ತಾಗಿ ಕೆಳಗೆ ಬಿದ್ದಳು. ಸರಪಳಿ ಎಳೆದು ಗಾಡಿ ನಿಲ್ಲಿಸಿದರು. ಮಾರ್ವಾಡಿ ಗೋಳಿಡಲಾರಂಭಿಸಿದ. ಎಷ್ಟು ಸಮಾಧಾನಪಡಿಸಿದರೂ ಅವನ ಗೋಳಾಟ ನಿಲ್ಲಲಿಲ್ಲ. ಕಡೆಗೆ ಯಜಮಾನ ಮನುಷ್ಯರೊಬ್ಬರು ಬಂದು "ಆದದ್ದು ಆಗಿಹೋಯಿತಯ್ಯ, ಬೇರೆ ಮದುವೆಯಾಗುವಂತೆ, ಸುಮ್ಮನೆ ಗೋಳಾಡಿದರೆ ಏನು ಪ್ರಯೋಜನ" ಎಂದು ಹೇಳಿದರು. ಅದಕ್ಕೆ ಮಾರ್ವಾಡಿ "ನಾನು ಅತ್ತದ್ದು ಅದಕ್ಕಲ್ಲ ಸ್ವಾಮೀ, ನಮ್ಮಿಬ್ಬರ ರೈಲ್ವೆ ಟಿಕೆಟ್‌ಗಳು ಅವಳ ಹತ್ತಿರವೇ ಇದ್ದವು" ಎಂದು ಹೇಳಿದ.

* * *

ಬೆಂಗಳೂರಿನಲ್ಲಿ ಲೈಸೆನ್ಸ್ ಪಡೆದ ೬೦೦ ಹೋಟಲುಗಳಲ್ಲದೆ, ಲೈಸನ್ಸ್ ಇಲ್ಲದವು ಸಹಾ ಕೆಲವಿವೆಯೆಂದು ಕಾರ್ಪೊರೇಷನ್ನಿನ ಸಭೆಯೊಂದರಲ್ಲಿ ತಿಳಿಸಲಾಯಿತು.

—ಇದರಂತೆ ಆಸ್ಪತ್ರೆಗಳ ಪಟ್ಟಿಯನ್ನೂ ಮಹಾಜನರ ಅವಗಾಹನೆಗೆ ತಂದಿದ್ದರೆ ಚೆನ್ನಾಗಿತ್ತು.

* * *

ಕರ್ನಾಟಕದಲ್ಲಿ ಮೈಸೂರು ಲೀನವಾಗಬೇಕೋ, ಮೈಸೂರಿನಲ್ಲಿ ಕರ್ನಾಟಕ ಲೀನವಾಗಬೇಕೋ ಎಂಬ ದೊಡ್ಡ ಗೊಂದಲವೆದ್ದಿದೆ.

—ಬಯಲೊಳಗೆ ಆಲಯವೋ। ಆಲಯದೊಳಗೆ ಬಯಲೊ। ಪುರಂದರ ವಿಠಲಾ॥

* * *

ಬಿಹಾರಿನ ಮಂತ್ರಿ ಶ್ರೀ ಅನುಗ್ರಹನಾರಾಯಣಸಿಂಹರವರು ಪೋಲೀಸ್ ಕೆಲಸವನ್ನು ಮಾಡಿದರಂತೆ.

—ನಮ್ಮ ಪೋಲೀಸ್ ಕಾನ್ಸ್ಟೇಬಲ್‌ಗಳು ಮಂತ್ರಿಗಳಂತೆ ವರ್ತಿಸುತ್ತಿರುವುದನ್ನು ನಾವು ನೋಡಿದ್ದೇವೆ.

* * *

ಕೊಲಂಬೋ ವಿಚಿತ್ರ ಪ್ರಾಣಿಸಂಗ್ರಹಾಲಯಕ್ಕೆ ಹಳ್ಳಿಯವನೊಬ್ಬನು ಬಿಳಿ ಕಾಗೆಯೊಂದನ್ನು ಹಿಡಿದು ತಂದುಕೊಟ್ಟಿದ್ದಾನೆ.

—ಬಿಳಿ ಕಾಗೆಯು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದೋ, ಆರ್.ಎಸ್.ಎಸ್.ಗೆ ಸೇರಿದ್ದೋ ಅಥವ ದ್ರಾವಿಡಕಜಗಂಗೆ ಸೇರಿದ್ದೋ ತಿಳಿದಿಲ್ಲ.

* * *

ಕಾನ್ಪುರದಲ್ಲೀ ಸಕ್ಕರೆಗೆ ಅಭಾವವಂತೆ.

—ಇದೇನು ಮಹಾ, ಅಕ್ಕಿ ಹೆಚ್ಚುವರಿ ಬೆಳೆಯುವ ಮಲೆನಾಡಿನಲ್ಲೇ ಅಕ್ಕಿಗೆ ಬರ ಬಂದಿರುವುದನ್ನು ನಾವು ನೋಡಿದ್ದೇವೆ.

* * *

ಸಿಲೋನಿನ ಅಂಧ ವಧುವೊಬ್ಬಳು ಬ್ರಿಟನ್ನಿನ ಅಂಧ ವರನನ್ನು ವಿವಾಹವಾದಳು.

—ಪ್ರೇಮಕ್ಕೆ ಕಣ್ಣಿಲ್ಲ ಎಂಬುದು ಮೇಲಿನ ಸುದ್ದಿಯಿಂದ ತಿಳಿದು ಬರುತ್ತದೆ.

* * *

ದೆಹಲಿಯ ನ್ಯಾಯಾಲಯವೊಂದರಲ್ಲಿ ಇಬ್ಬರು ವಕೀಲರಲ್ಲಿ ನಡೆದ ವಾಗ್ಯುದ್ಧದಲ್ಲಿ ಒಬ್ಬ ವಕೀಲನು ಮತ್ತೊಬ್ಬ ವಕೀಲನಿಗೆ ಒದೆದುದರ ಪರಿಣಾಮವಾಗಿ ಅವನ ಕಾಲು ಮುರಿಯಿತು.

—ವಾಗ್ಯುದ್ಧ ಪಾದ್ಯುದ್ಧವಾಯಿತೂ ಅನ್ನಿ.

* * *

ಖಾದಿಗೆ ರಕ್ಷಣೆ ಕೊಡುವ ಮಸೂದೆಯೊಂದು ಪಾರ್ಲಿಮೆಂಟಿನಲ್ಲಿ ಪಾಸಾಯಿತು.

—ಅದನ್ನು ಹಾಕಿಕೊಂಡವರಿಗೆ ಸಹ ರಕ್ಷಣೆ ಕೊಡುವ ಮಸೂದೆ ಪಾಸಾಗಿದ್ದರೆ ಚೆನ್ನಾಗಿತ್ತು.

* * *

ಭಾರತ ರಾಜ್ಯಾಂಗದ ಸಂಸ್ಕೃತ ಅವತರಣವು ಸಿದ್ಧವಾಗಿದೆಯಂತೆ.

—ನಮ್ಮಂಥವರಿಗೆ ಅನುಕೂಲವಾಗಲು ಅದರ ಇಂಗ್ಲೀಷ್ ಅವತರಣವನ್ನು ಒದಗಿಸಿಕೊಳ್ಳಲು ಕೋರುತ್ತೇವೆ.

* * *

ಸರ್ದಾರ್ ಪಟೇಲರು ಅತ್ಯಂತ ಉತ್ತಮ ಕ್ರಿಕೆಟ್ ಆಟಗಾರರಾಗಿದ್ದರು —ಸಿ. ಕೆ. ನಾಯಿಡು.

—ಹೌದು ಅನೇಕ ರಾಜಮಹಾರಾಜರ ವಿಕೆಟ್‌ಗಳನ್ನು ಅವರು ಉರುಳಿಸಿದ್ದನ್ನು ನಾವು ನೋಡಿದ್ದೇವೆ.

* * *

ಸದಸ್ಯರು ಬುಷ್‌ಕೋಟ್ ಹಾಕಿಕೊಂಡು ಬಂದರೆ ಪಾರ್ಲಿಮೆಂಟಿಗೆ ಅವಮಾನ ಮಾಡಿದಂತಾಗುತ್ತದೆಂದೂ, ಅದನ್ನು ಹಾಕಿಕೊಂಡು ಬರಕೂಡದೆಂದೂ, ಸಿಲೋನಿನ ಪಾರ್ಲಿಮೆಂಟಿನಲ್ಲಿ ಅಧ್ಯಕ್ಷರು ಹೇಳಿದರು

—ಬುಷ್‌ಕೋಟ್ ನರಸಿಂಹದೇವರ ಅವತಾರ ಇದ್ದಂತೆ ಅದ ಷರ್ಟ್ ಹೌದು, ಕೋಟ್ ಹೌದು. ಚೆನ್ನಾಗಿ ಕಾಣುತ್ತದೆ, ಕಾಣುವುದಿಲ್ಲ ಮರ್ಯಾದೆ ತರುತ್ತದೆ, ತರುವುದಿಲ್ಲ. ಇದರ ಉಪಯೋಗದ ಬಗ್ಗೆ ಸರ್ಕಾರ ಪ್ರಕಟಣೆಯೊಂದು ಹೊರಬಿದ್ದರೆ ಅನುಕೂಲ

* * *

## ಊರಿನಿಂದ ಬಂದ ಕಾಗದ

ಇಲ್ಲಿ ಎಲ್ಲಾ ಕ್ಷೇಮ. ನಿಮ್ಮಲ್ಲಿಯ ಕ್ಷೇಮಕ್ಕೆ ಕಾಗದ ಬರೆಸಿ.......

# ಎಲ್ಲಿರುವೆ ತಂದೆ ಬಾರೋ

(ಈಗಿನ ಕಾಲಕ್ಕನುಸರಿಸಿ)

ಎಲ್ಲಿಂದ ರವೆ ತಂದ್ಯೋ ಹೇ ಮಾರುತಿ,
ತಿರುಗಿ ಇನ್ಯಾರಿಗೆ ಮಾರುತಿ, ಹೊಲ ಮಾರುತಿ, ಮನೆ ಮಾರುತಿ
ಆಸ್ತಿ ಮಾರುತಿ, ಇದ್ದಬದ್ದುದನ್ನೆಲ್ಲಾ ಮಾರುತಿ ||
ಎಲ್ಲಿಂದ ರವೆ ತಂದ್ಯೋ ||

ಉಂಗುರದೊಳ್ ಬೆರಳ ಸಿಕ್ಕಿಸಿಕೊಂಡು
ಒದ್ಯಾಡಿದೆಲ್ಲೋ ಮಾರುತಿ || ಎಲ್ಲಿಂದ ರವೆ ತಂದ್ಯೋ ||

ರಂಗನ ಅರ್ಧ ಅಂಗಿಯ ತೋಳಲಿ
ಕೈಯ್ಯ ಸಿಕ್ಕಿಸಿಕೊಂಡು ಮಾನಭಂಗ
ಮಾಡಿಕೊಂಡೆಲ್ಲೋ ಮಾರುತಿ || ಎಲ್ಲಿಂದ ರವೆ ತಂದ್ಯೋ ||

ಬೊಕ್ಕಸದ ಲಾಕು ಮುರಿದು ಕಕ್ಕಸಿಗೆ
ಹಾರಿದೆಲ್ಲೋ ಮಾರುತಿ || ಎಲ್ಲಿಂದ ರವೆ ತಂದ್ಯೋ ||

*  *  *

# ಪ್ರಶ್ನಪತ್ರಿಕೆ

ಹದಿನೈದು ವರ್ಷ ಮೀರಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಈ ಪ್ರಶ್ನೆಗಳಿಗೆ ಉತ್ತರ ಕೊಡಬೇಕು. ಸ್ಫುಟವಾಗಿ ಅಕ್ಷರಗಳನ್ನು ಬರೆದರೆ ಹತ್ತು ಅಂಕಗಳನ್ನು ಹೆಚ್ಚಾಗಿ ಕೊಡಲಾಗುವುದು. (ಕಾಲ ಎರಡು ಗಂಟೆ)

## ವಿದ್ಯಾರ್ಥಿನಿಯರಿಗೆ

೧) ನಿಮ್ಮ ತರಗತಿಯಲ್ಲಿನ ಯಾವ ಹುಡುಗಿಯನ್ನು ಕಂಡರೆ ನೀವು ಹೊಟ್ಟೆಕಿಚ್ಚು ತುಂಬಾ ಪಡುತ್ತೀರಿ - ಕಾರಣ ತಿಳಿಸಿ.

೨) ನಿನಾನ್, ಜಾರ್ಜೆಟ್, ಮೈಸೂರ್ ಸಿಲ್ಕ್, ಅವರ ಗಂಡಿ, ಡೋರಿಯಾ, ವಾಯಿಲ್-ಇವುಗಳಲ್ಲಿ ಯಾವ ಬಟ್ಟೆಯ ಯಾವ ತರಹ ಉಡಿಗೆ ತೊಡಿಗೆಗಳು ಚೆನ್ನ?

೩) ಅಶೋಕ್‌ಕುಮಾರ್, ದೇವ್‌ಆನಂದ್, ರಾಜಕಪೂರ್, ತ್ಯಾಗರಾಜಭಾಗವತರ್ ಇವರುಗಳಲ್ಲಿ ಯಾರ ಭಾವಚಿತ್ರವನ್ನು ತಲೆದಿಂಬಿನ ಕೆಳಗಿಟ್ಟುಕೊಂಡು ಮಲಗುತ್ತೀರಿ?

೪) ಲಲಿತ, ಪದ್ಮಿನಿ, ವೈಜಯಂತಿಮಾಲಾ, ನರ್ಗಿಸ್ ಇವರ ಹುಟ್ಟಿದ ತಾರೀಖುಗಳನ್ನು ತಿಳಿಸಿ.

೫) ನಿಮ್ಮ ಭಾವೀಪತಿ ಹೇಗಿರಬೇಕು? ಅವನಲ್ಲಿ ಯಾವ ಯಾವ ಸಿನಿಮಾ ನಟನ ಲಕ್ಷಣಗಳಿರಬೇಕು? ನಿಮ್ಮ ಮನೆ ಹೇಗಿರಬೇಕು, ನೀವು ಕೊಳ್ಳುವ ಕಾರ್ ಯಾವ ಮಾಡಲ್ ಮತ್ತು ಮೇಕ್ ಆಗಿರಬೇಕು-ಇತ್ಯಾದಿ ವಿವರಗಳನ್ನು ಫುಲ್‌ಸ್ಕೇಪ್ ಒಂದು ಪುಟಕ್ಕೆ ಮೀರದಂತೆ ಬರೆಯಿರಿ.

## ವಿದ್ಯಾರ್ಥಿಗಳಿಗೆ

೧) ನಿಮ್ಮ ಊರಿನಲ್ಲಿ ಬುಷ್ ಕೋಟುಗಳನ್ನು ಯಾರು ಬಹಳ ಚೆನ್ನಾಗಿ ಹೊಲಿಯುತ್ತಾರೆ? ನಿಮ್ಮ ಆದರ್ಶ ಬುಷ್ ಕೋಟ್ ಯಾವ ಬಟ್ಟೆಯದಾಗಿರಬೇಕು ಮತ್ತು ಅದರ ಹೊಲಿಗೆ ಹೇಗಿರಬೇಕು? ಚಿತ್ರ ಸಹಿತ ನೂರಐವತ್ತು ಶಬ್ದಗಳಲ್ಲಿ ಈ ಪ್ರಶ್ನೆಗೆ ಉತ್ತರ ಕೊಡಿ.

೨) ಒಬ್ಬ ಸಿನಿಮಾ ತಾರೆಯ ಜೀವನ ಪರಿಚಯವನ್ನು ಬರೆಯಿರಿ. ಅದರಲ್ಲಿ ಈ ಕೆಳಕಂಡ ಅಂಶಗಳನ್ನು ನಮೂದಿಸಿ. ಆಕೆಗೆ ಯಾವ ಯಾವಾಗ ಯಾರು ಯಾರೊಡನೆ ಮದುವೆಗಳಾದವು? ಈಗಿರುವ ಗಂಡ ( ? ) ನಾರು? ಆಕೆಯ ಪ್ರೀತಿಯ ತಿಂಡಿ ತಿನಸುಗಳೇನು? ಆಕೆ ಭಾಗವಹಿಸಿರುವ ಚಿತ್ರಗಳ ಹೆಸರುಗಳು, ಅವಳು ಹಾಡಿರುವ ಯಾವ ಹಾಡು ನಿಮಗೆ ಬರುತ್ತದೆ ಮತ್ತು ಅದರ ಮೊದಲಿನ ಚರಣ ಮತ್ತು ಒಂದು ಪಲ್ಲವಿಯನ್ನು ಬರೆಯಿರಿ. ಒಟ್ಟು ಉತ್ತರವು ಫುಲ್‌ಸ್ಕೇಪ್ ಒಂದು ಪುಟಕ್ಕೆ ಮೀರಿರಕೂಡದು.

೩) ನಿಮಗೆ ಪರಿಚಯವಿರುವ ಹೋಟಲುಗಳಲ್ಲಿ ಯಾವ ಯಾವ ತಿಂಡಿಗಳು ಚೆನ್ನಾಗಿರುತ್ತವೆ. ವಿವರಗಳೊಡನೆ ತಿಳಿಸಿ. ನಿಮ್ಮ ಅಭಿಪ್ರಾಯ ದಲ್ಲಿ ಯಾವ ಹೋಟಲಿನಲ್ಲಿ ದೋಸೆಯನ್ನು ಚೆನ್ನಾಗಿ ಹಾಕುತ್ತಾರೆ?

೪) ಮರ್ಚೆಂಟ್, ಹಜಾರೆ, ರುಸಿ ಮೋದಿ ಮತ್ತು ಅಮರನಾಥ್ ಈ ಕ್ರಿಕೆಟ್ ಆಟಗಾರರಲ್ಲಿ ಯಾರು ಹೆಚ್ಚು ಶತಕಗಳನ್ನು ಹೊಡೆದಿದ್ದಾ ರೆಂಬುದನ್ನು ವಿವರಗಳ ಸಮೇತ ತಿಳಿಸಿ. ನಿಮ್ಮ ಅಭಿಪ್ರಾಯದಲ್ಲಿ ಒಳ್ಳೆಯ ಬೌಲರ್ ಮತ್ತು ವಿಕೆಟ್‌ಕೀಪರ್‌ಗಳ ನಾಲ್ಕು ನಾಲ್ಕು ಹೆಸರು ಗಳನ್ನು ತಿಳಿಸಿ.

೫) ಮನೆಯಿಂದ ಇಪ್ಪತ್ತೈದು ರೂಪಾಯಿಗಳನ್ನು ಹೆಚ್ಚಾಗಿ ತರಿಸಿ ಕೊಳ್ಳಲು ನೀವು ಏನು ಉಪಾಯ ಮಾಡಿಕೊಂಡಿದ್ದೀರಿ? ಪ್ರತಿ ತಿಂಗಳೂ ಬೇರೆಬೇರೆ ಉಪಾಯ ಹುಡುಕುತ್ತೀರೋ, ಅಥವಾ ಒಂದೇ ಉಪಾಯವು ಯಾವ ತೊಂದರೆಯೂ ಇಲ್ಲದೆ ಸಾಗಿಬರುತ್ತಿದೆಯೋ, ತಿಳಿಸಿ.

## ಅರ್ಥ ಹೇಳುವುದು

ಹಳ್ಳಿಯ ಉಪಾಧ್ಯಾಯರೊಬ್ಬರು ಹುಡುಗರಿಗೆ ಕನ್ನಡ ಗದ್ಯ ಪಾಠ ಹೇಳುವಾಗ "ಚೇಳ ಬಾಲದ ಉರಿಯ ತಾಳಲುಬಹುದು" ಎಂಬುದಕ್ಕೆ ಈ ರೀತಿ ಅರ್ಥ ಹೇಳಿದರು.

ಚೇಳ-ವೃಶ್ಚಿಕದ; ಬಾಲದ–ಪೃಚ್ಛದ; ಉರಿಯ–ಜ್ವಾಲೆಯನ್ನು; ತಾಳಲುಬಹುದು-ಅತ್ಯಂತ ಶಾಂತಚಿತ್ತದಿಂದ ಅನುಭವಿಸಬಹುದು.

*  *  *

## ಅಪಾರ್ಥ ಹೇಳುವುದು

"ಇಂದುವದನೆಯ ಸಂತವಿಟ್ಟು ಮುಕುಂದ ರಥವೇರಿದ"

ಇಂದು-ಇಂದುವನ್ನು, ವದನೆಯ–ಬದನೆಕಾಯಿ ಮಾರಾಟ ಮಾಡಲು, ಸಂತವಿಟ್ಟು-ಸಂತೆಯಲ್ಲಿ ಕೂಡಿಸಿ, ಮುಕುಂದ-ಮುಕುಂದನು, ರಥವೇರಿದ–ಗಾಡಿ ಹತ್ತಿಕೊಂಡು ಹಳ್ಳಿಗೆ ಹೋದ.

*  *  *

## ಭಾರಿ ಕಳವು

ಈ ಊರಿನ ಶ್ರೀಮಂತರೊಬ್ಬರ ಮನೆಗೆ ಕಳ್ಳರು ನುಗ್ಗಿ ಎರಡೂವರೆ ಸೇರು ಅಕ್ಕಿ, ಎರಡು ಸೇರು ಗೋಧಿ ಮತ್ತು ಸುಮಾರು ಅರ್ಧವೀಸೆಯಷ್ಟು ಸಕ್ಕರೆಯನ್ನು ಕದ್ದುಕೊಂಡು ಹೋಗಿದ್ದಾರೆ. ಪೋಲೀಸಿನವರು ತನಿಖೆ ನಡೆಸುತ್ತಿದ್ದಾರೆ.

*  *  *

# ದ್ವಾದಶ ರಾಶಿ ಭವಿಷ್ಯ

— ಃಂಃ —

## ಮೇಷ



ನೀವು ಶುದ್ಧ "ಬಕ್ರಾ"ಗಳೆಂಬುದು ನನಗೆ ಗೊತ್ತು. ನಿಮ್ಮನ್ನು ಸುಲಿದು ತಿನ್ನಲು ಅಹಿಂಸಾವಾದಿಗಳೇ ಹೊಂಚು ಕಾಯುತ್ತಿದ್ದಾರೆ ನಿಮ್ಮ ಪೀಳಿಗೆಯವರಲ್ಲಿ ಬಹು ಜನ ಮೊನ್ನಿನ ಆಯುಧ ಪೂಜೆಯಲ್ಲಿಯೇ ಕಣ್ಮರೆಯಾಗಿದ್ದಾರೆ. ಸದ್ಯಕ್ಕಿರುವ ಆಹಾರಾಭಾವದಲ್ಲಿ ನೀವು ಜನತೆಗೆ ವಿಶೇಷ ಸೇವೆ ಸಲ್ಲಿಸಬಹುದು.

## ವೃಷಭ



ನೀವು ಗುಟುರು ಹಾಕುವಾಗ ಹಿಂದೆ ಮುಂದೆ ನೋಡ ಬೇಕು. ಮೋಟುಗೋಡೆ ಹಾರುವುದರಲ್ಲಿ ನೀವು ರೆಕಾರ್ಡ್ ಸ್ಥಾಪಿಸಿದ್ದೀರಿ. ಆದರೆ ನಿಮ್ಮ ಮೇಲೆ ವೃದ್ಧರ ಪೈಪೋಟಿ ಇದೆ. ಅವರ ಸಹಾಯಕ್ಕಾಗಿ ಪುನರ್‌ಯೌವ್ವನ ಔಷಧಗಳೂ, ಕಾಯಕಲ್ಪ ಚಿಕಿತ್ಸೆಗಳೂ ಸಿದ್ಧವಾಗಿವೆ. ಅವು ಯಶ ಹೊಂದಿದಲ್ಲಿ ನಿಮ್ಮನ್ನು ತಾತ್ಸಾರದಿಂದ ನೋಡಬಹುದು.

## ಮಿಥುನ



ನಿಮ್ಮ ಸ್ವೇಚ್ಛಾಚಾರಕ್ಕೂ ಒಂದು ಮಿತಿ ಅವಶ್ಯಕ. ನೀವು ಹದ್ದು ಮೀರಿದ್ದರಿಂದಲೇ ಪ್ರಪಂಚದ ಜನಸಂಖ್ಯೆ ಚೇಳಿನ ವಿಷದಂತೆ ಏರುತ್ತಿದೆ. ನಿಮ್ಮ ಉಪಟಳವನ್ನು ತಡೆಗಟ್ಟಲು ನೂರಾರು ತರಹೆ ಔಷಧಿಗಳು ತಯಾರಾಗಿವೆ. ಆ ಔಷಧಿಗಳ ಜಾಹಿರಾತುಗಳಿಂದಲೇ ಕೆಲವು ಪತ್ರಿಕೆಗಳು ಬಾಳಿ ಬದುಕುತ್ತಿವೆ. ನಿಮ್ಮ ಕಡಿವಾಣವನ್ನು ಬಿಗಿಹಿಡಿಯಲು ಸೂಚಿಸಬಯಸುತ್ತೇನೆ.

## ಕರ್ಕ



ಮೂರನೆ ಮಹಾಯುದ್ಧ ಎಂದು ಆರಂಭವಾಗುತ್ತದೆಯೆಂದು ಎದುರು ನೋಡುತ್ತಿದ್ದೀರಲ್ಲವೇ ? ಈಗಾಗಲೇ ಬ್ಲಾಕ್ ಮಾರ್ಕೆಟ್ ಮಾಡಿ ಹೊಟ್ಟೆ ಊದಿಸಿಕೊಂಡು ಅಷ್ಟಡ್ಡಲಾಗಿ ನಡೆಯುತ್ತಿದ್ದೀರಿ. ಮನೆ ಮುಳುಗಿಸುವ ಕೆಲಸಕ್ಕೆ ತಿಲಾಂಜಲಿ ಕೊಡಿ. ಬದಲಾವಣೆ ಹೊಂದುತ್ತಿರುವ ಕಾಲದ ಕಡೆ ನಿಮ್ಮ ಲಕ್ಷ್ಯ ಬೀಳಲಿ.

## ಸಿಂಹ



ನೀವು ಗ್ರಾಮ ಸಿಂಹವೆಂಬುದು ನನಗೆ ಗೊತ್ತು. ಬಾಲ ಅಲ್ಲಾಡಿಸುವುದರಲ್ಲಿ ನೀವು ಗಟ್ಟಿಗರು. ನಿಮ್ಮ ಬೊಗುಳುವಿಕೆಯಿಂದ ಜನಕ್ಕೆ ತಲೆ ನೋವು ಉಂಟಾಗಿದೆ. ಬರೀ ಭಾಷಣ ಮಾಡುವುದೇ ನಾಯಕರ ಕೆಲಸ ಎಂದು ತಿಳಿಯಬೇಡಿ. ಜನತೆಯ ಹಿತ ರಕ್ಷಿಸುವುದೂ ನಾಯಕರ ಕೆಲಸವೆಂಬುದನ್ನು ಗಮನದಲ್ಲಿಡಿ.

## ಕನ್ಯಾ



ತೊಟ್ಟಿಲು ತೂಗುವ ಕೈ ಜಗವನ್ನೇ ಆಳುತ್ತದೆಂದು ಹೇಳುತ್ತಾರೆ. ಆದರೆ ನೀವು ತೊಟ್ಟಿಲು ತೂಗುವುದನ್ನೇ ಕೈ ಬಿಡಲು ಹವಣಿಸುತ್ತಿದ್ದೀರಿ. ಗಂಡಸರ ಸರಿಜೋಡಿ ಪ್ರತಿಸ್ಪರ್ಧಿಸುವುದು ಈಗ ಹಿತವಾಗಿರಬಹುದು. ಆ ಮೇಲೆ ? ಗಂಡಸರೂ ನಿಮ್ಮನ್ನು ಪ್ರತಿಸ್ಪರ್ಧಿಸಲು ಹೊರಟಿದ್ದಾರೆ. ಜೋಕೆ !

## ತುಲಾ



ಬೆಪ್ಪುತಕ್ಕಡಿಯು ಹಾಗಿದ್ದರೆ ಯಾರು ಕೇಳುತ್ತಾರೆ ? ಈ ಮೋಸದ ಜಗತ್ತಿನಲ್ಲಿ ಮೋಸವನ್ನು ಅರ್ಥ ಮಾಡಿಕೊಂಡಿರಬೇಕು. ನೀವು ಅದನ್ನು ಇತರರ ಮೇಲೆ ಪ್ರಯೋಗಿಸುವುದಕ್ಕಲ್ಲ, ಇತರರು ಅದನ್ನು ನಿಮ್ಮ ಮೇಲೆ ಪ್ರಯೋಗಿಸದಿರಲು ತಡೆಯುವುದಕ್ಕೆ.

## ವೃಶ್ಚಿಕ



ಸಂಬಿದವರಿಗೆ ಕೈ ಕೊಡುವ ಉದ್ಯಮವನ್ನು ಇನ್ನು ನಾಕುಮಾಡಿ. ಅಂಗಲಾಚಿ ಓಟು ಕೇಳಿ, ಚುನಾವಣೆಯಲ್ಲಿ ಗೆದ್ದ ಮೇಲೆ ನಿಮ್ಮ ಓಟುದಾರರನ್ನು ಮರೆತು ಬಿಡಬೇಕೆ ? ನಿಮ್ಮ ದುರ್ಬುದ್ಧಿಯೇ ನಿನುಗೆ ಹಾನಿ ತರುತ್ತದೆಂಬುದನ್ನು ಮರೆಯಬೇಡಿ. ನಿಮ್ಮ ವಂಶೀಕರಿಗೆ ಬಾಲದಲ್ಲಿಯೇ ವಿಷವಿರುವುದರಿಂದ ನಿಮ್ಮ ಬಾಲಬಡಕರಿಗೆ ಖಂಡಿತವಾಗಿಯೂ ನೀವು ಪೆಟ್ಟನ್ನು ಕೊಡುವಿರಿ.

## ಧನು



ಈಗ ನಿಮ್ಮನ್ನು ಯಾರು ಕೇಳುತ್ತಾರೆ. ಬರೀ ಗತವೈಭವವನ್ನು ನೆನೆಸಿಕೊಳ್ಳುತ್ತಿರುವ ಪೂರ್ವ ಸುವಾಸಿನಿಯರಂತಾಗಿದೆ ನಿಮ್ಮ ನಡತೆ. ಆಟಂಬಾಂಬ್, ಹೈಡ್ರೋಜನ್ ಬಾಂಬ್ ಯುಗವಿದು. ಕಾಲಕ್ಕೆ ತಕ್ಕಂತೆ ನಡೆಯಿರಿ. ನಾನು ನೋಡಿದಂತೆ ನಿಮ್ಮ ಬಳಕೆ ಇರುವುದು ಹಾಸಿಗೆಗೆ ಹತ್ತಿ ಹೊಡಚುವವರು ಮತ್ತು ದೇವರಿಗೆ ಬತ್ತಿ ಮಾಡುವ ಹೆಂಗಸರು. ಇಷ್ಟರಿಂದಲೇ ನೀವೇಕೆ ತೃಪ್ತಿ ಹೊಂದಬೇಕು. ಮುನ್ನುಗ್ಗಿ.

## ಮಕರ



ಇತರರನ್ನು ನುಂಗಿಯೇ ನೀವು ಬದುಕಬೇಕಾಗಿದೆ. ಎರಡನೆಯ ಮಹಾಯುದ್ಧವಾದಮೇಲಂತೂ ನಿಮ್ಮ ಹಾವಳಿ ಅತಿ ಹೆಚ್ಚಾಗಿದೆ. ಮೂರನೆ ಮಹಾಯುದ್ಧ ಆರಂಭವಾಗುವ ಸೂಚನೆಗಳನ್ನು ನೋಡಿ ನಿಮ್ಮ ಆನಂದಕ್ಕೆ ಮೇರೆಯೇ ಇಲ್ಲವೇನೋ ? ನೀವು ತಿನ್ನಬೇಡಿರೆಂದು ನಾನು ಹೇಳುವದಿಲ್ಲ. ನೋಡಿ ತಿನ್ನಿ. ಧರ್ಮ ಕರ್ಮಗಳಿಗೂ ಸ್ವಲ್ಪ ಬೆಲೆ ಕೊಡಿ.

## ಕುಂಭ



ಯಾವ ಹುತ್ತದಲ್ಲಿ ಯಾವ ಹಾವು ಇದೆಯೆಂದು ಹೇಳಲು ಹೇಗೆ ಸಾಧ್ಯವಿಲ್ಲವೋ, ಈಗಿನ ಕಾಲದಲ್ಲಿ ಯಾವ ಕುಂಭದಲ್ಲಿ ಯಾವ ಕಳ್ಳಭಟ್ಟಿ ಸರಾಬು ಇದೆಯೆಂದು ಹೇಳಲು ಸಾಧ್ಯವಿಲ್ಲ. ನೀವು ಭರ್ತಿಯಾಗಿದ್ದರೇ ಅದಕ್ಕೆ ಬೆಲೆ, ಅರ್ಧವಾದರೆ ನಗೆಪಾಟಲಿಗೆ ಗುರಿಯಾಗುತ್ತೀರಿ. ನೀವು ಬಡವರ ಆಧಾರಿಗಳು, ಅವರನ್ನು ಕೈಬಿಡಬೇಡಿ.

## ಮೀನ





ಬರೀ ನುಣುಚಿಕೊಳ್ಳುವ ಹವ್ಯಾಸದಲ್ಲಿಯೇ ಏಕೆ ತೊಡಗಿದ್ದೀರಿ. ನೀವು ಹೇಗೆ ನುಣುಚಿಕೊಂಡರು, ಒಂದಲ್ಲ ಒಂದು ದಿನ ಯಾವುದಾದರೂ ಒಂದು ಗಾಳಕ್ಕೆ ಸಿಕ್ಕೇ ಸಿಗುವಿರಿ. ಒಂದು ಪಂಥ, ಒಂದು ರಾಜಕೀಯವನ್ನು ಅನುಸರಿಸಿ. ಆಗಾಗ್ಗೆ ಟೋಪಿ ಬದಲಾಯಿಸುತ್ತ ಹೋಗಬೇಡಿ.

ಮನೆಯೊಂದರಲ್ಲಿ ಕಳ್ಳತನದಲ್ಲಿ ಸಾರಾಯಿ ಮಾಡುತ್ತಿದ್ದುದನ್ನು ಪೋಲೀಸಿನವರು ಪತ್ತೆ ಹಚ್ಚಿ, ಆಪಾದಿತರನ್ನು ನ್ಯಾಯಾಧೀಶರ ಬಳಿ ನಿಲ್ಲಿಸಿದರು.

—ತಾವು ಕೇವಲ ಗೃಹ ಕೈಗಾರಿಕೆಯಲ್ಲಿ ತೊಡಗಿದ್ದರೆಂದೂ ಯಾವ ಅಪರಾಧವನ್ನೂ ಮಾಡಿಲ್ಲವೆಂದೂ ಆಪಾದಿತರು ಹೇಳಿದರಂತೆ.

* * *

ಇಂಡಿಯಾ ಸರ್ಕಾರ ಸಿನಿಮಾ ಪ್ರೇಕ್ಷಕ ಗಣದ ಮೇಲೆ ಒಂದು ನಿರ್ಬಂಧ ಹಾಕಿದೆ. ೧೬ ವಯಸ್ಸಿನೊಳಗಿರುವ ಹುಡುಗ ಹುಡುಗಿಯರು ಕೆಲವು ದರ್ಜೆ ಚಿತ್ರಗಳನ್ನು ನೋಡಕೂಡದಂತೆ. ಆ ಚಿತ್ರಗಳನ್ನು ೧೮ ವರ್ಷ ಮೀರಿದ ಸ್ತ್ರೀಪುರುಷರು ನೋಡಬಹುದಂತೆ.

—ತರುಣಿಯರು ವಿವಾಹವಾಗುವ ಕನಿಷ್ಠ ಪರಿಮಿತಿಯ ವಯಸ್ಸು ೧೫ ಇರಬೇಕೆಂದು ಸರ್ಕಾರ ಗೊತ್ತುಪಡಿಸಿದೆ. ಜೀವನದ ರಹಸ್ಯಗಳನ್ನರಿತ ೧೫ ವರ್ಷದ ತರುಣಿಯನ್ನು ಒಬ್ಬ ಯುವಕ ಮದುವೆಯಾಗಿದ್ದಾನೆ. ಆ ತರುಣಿಯೊಂದಿಗೆ ಸಿನಿಮಾ ನೋಡಲು ಹೋದರೆ ಅಲ್ಪವಯಿಗಳು ನೋಡಲು ನಿರ್ಬಂಧ ಹಾಕಿರುವ ಚಿತ್ರಗಳಿಗೆ ಆಕೆಯನ್ನು ಕರೆದುಕೊಂಡು ಹೋಗಕೂಡದೆ? ಒಂಟಿಯಾಗಿ ಒಬ್ಬನೇ ಚಿತ್ರ ನೋಡಲು ಹೋಗಬೇಕೆ ?

* * *

ಖಾದಿ ಸಮವಸ್ತ್ರಧಾರಿಗಳಾದ ೮ಮಂದಿ ಚಾಕು, ಕೋಲುಗಳನ್ನುಹಿಡಿದು ಯಾರದೋ ಮನೆಗೆ ನುಗ್ಗಿ, ಮನೆಯ ಯಜಮಾನನನ್ನೂ ಅವನ ಹೆಂಡತಿಯನ್ನೂ ಹೊಡೆದು ಸುಮಾರು ೮ ಸಾವಿರ ರೂಪಾಯಿಗಳನ್ನು ದೋಚಿಕೊಂಡು ಹೋಗಿದ್ದಾರೆ.

—ನಮ್ಮಲ್ಲಿರುವ ಖಾದಿಧಾರಿಗಳು ಚಾಕು ಕೋಲುಗಳ ಗೊಡವೆಗೆ ಹೋಗದೆ ಬರೀ ಅರ್ಜಿಗಳಿಂದಲೇ ಮೇಲೆ ವಿವರಿಸಿದ ಕೆಲಸ ಸಾಧಿಸುತ್ತಾರೆ.

# ಮದುವೆಯ ಕರೆಯೋಲೆ:

॥ ಶ್ರೀ ಪರ್ಮಿಟೇಶ್ವರ ಪ್ರಸನ್ನ ॥

ಶ್ರೀ . ... ..... .... ... ..... ..... ..... . . ... ...... ... . . . . ... ... .. . .. ರವರ ಸ॥ ಕ್ಕೆ.

ನಾಡಿಗೇರ ಕಂಟ್ರೋಲರಾಯನು ಮಾಡುವ ನಮಸ್ಕಾರಗಳು. ಅದಾಗಿ ಉಭಯ ಕುಶಲೋಪರಿ ತರುವಾಯ, ಇದೇ ವೈಶಾಖ ಶುದ್ಧ ನವಮಿ ಮಧ್ಯರಾತ್ರಿ 12—30 ಗಂಟೆ ಒಳಗೆ ಸಲ್ಲುವ ಚೋರಲಗ್ನದಲ್ಲಿ

| ನನ್ನ ಹಿರಿಯ ಮಗ | ಕಳ್ಳೂರು ಜೋಡಿದಾರ್ ನುಂಗೂರಾಯರ ಕನಿಷ್ಠ ಪುತ್ರಿ |
|---|---|
| **ಚಿ॥ ಲೈಸನ್ಸ್ ಕುಮಾರನಿಗೆ** | **ಚಿ॥ ಹ॥ ಸೌ॥ ತಿನ್ನಮ್ಮ** |

ಎಂಬ ವಧುವನ್ನು ಕೊಟ್ಟು ಬ್ಲಾಕ್ ಮಾರ್ಕೆಟ್ ಹಿಂಭಾಗದಲ್ಲಿರುವ ನನ್ನ ಸ್ವಗೃಹ " ಸಿಮೆಂಟ್ " ಕಟ್ಟಡದಲ್ಲಿ ವಿವಾಹ ಮಹೋತ್ಸವವನ್ನು ಜರುಗಿಸಬೇಕೆಂದು ಆರ್ಯರಾದ ಉನ್ನತ ಪೋಲೀಸ್ ಅಧಿಕಾರಿಗಳು, ರೇಷನ್ ಅಧಿಕಾರಿಗಳು ಮತ್ತು ಡಿಪ್ಪೋದವರು ನಿಶ್ಚಯಿಸಿದ್ದಾರೆ. ತಾವು ಸಕಾಲಕ್ಕೆ ಬಂದು ವಧೂವರರನ್ನು ಆಶೀರ್ವದಿಸಿ ನನ್ನ ಮನಸ್ಸನ್ನು ಸಂತೋಷಪಡಿಸಬೇಕೆಂದು ಕೋರುವ,

ಇತಿ, ತಮ್ಮವನಾದ,

**ನಾಡಿಗೇರ ಕಂಟ್ರೋಲರಾಯ**

ತಮ್ಮ ಸುಖಾಗಮನವನ್ನು ಬಯಸುವ :

(1) ಕಬ್ಬಿಣೇಶ್ವರರಾವ್ (2)ರಾವ್‌ಬಹದ್ದೂರ್ ಪೆಟ್ರೋಲ್‌ಕರ್ (3) ಎನ್.ಕೆ. ಸೀಮೇ ಎಣ್ಣೆ (4) ಟೈರೋಜಿರಾವ್.

ಶುಭಾಶಯ



INDIAN POSTS AND TELEGRAPHS DEPARTMENT




N A

NOTICE

334 D

This form must accompany any inquiry made respecting this telegram.

| Charge to pay | |
|---|---|
| Rs. | As. |
| | |

| Handed in at (Office of Origin) | Date | Hour. | Minute | Service Instructions | Words |
|---|---|---|---|---|---|
| Davangere | 22 | 13 | 5 | | 25 |

Recd. here at 18 H. 16 M.

To License Kumar S/o
Nadiger control Rao care
Parojamata By C
wish you Joy next
year a boy name
of allotment Kumar, R G Sivakumar

*N. B.*—The name of the Sender, if telegraphed, is written after the text.

## ಶ್ವಾನರಾಕ್ಷಸ

ಹಳ್ಳಿಯ ಆಚಾರ್ಯರೊಬ್ಬರು ಯಾವುದೋ ಕೆಲಸದ ನಿಮಿತ್ತ ಪಕ್ಕದ ಊರಿಗೆ ಬಂದರು. ನಿಷ್ಠಾವಂತರಾದ ಅವರು ಸ್ವಯಂಪಾಕ ನಿಯಮವನ್ನು ಇಟ್ಟುಕೊಂಡಿದ್ದರು. ಮಡಿ ಮೈಲಿಗೆಗಳು ಸರಿಹೋಗುವುದಿಲ್ಲವೆಂದು ಆ ಊರಿನ ಆಚೆ ಇದ್ದ ಭಾವಿಯ ದಡದಲ್ಲಿ ಅಡಿಗೆ ಹೂಡಿದರು. ಮೂರು ಕಲ್ಲುಗುಂಡುಗಳ ಒಲೆ ರಚಿಸಿ ಅದರ ಮೇಲೆ ತಪ್ಪಲೆ ಏರಿಸಿದರು. ಅದಕ್ಕೆ ಇಪ್ಪತ್ತು ಗಜ ದೂರದಲ್ಲಿ ದೇವರ ಪೂಜೆಗೆ ಅಣಿಮಾಡಿಕೊಂಡಿದ್ದರು. ಒಂದೊಂದೆ ದೇವರನ್ನು ಸಂಪುಷ್ಟದಿಂದ ತೆಗೆದು ಅದಕ್ಕೆ ಅಭಿಷೇಕಮಾಡುತ್ತಿದ್ದರು.

ಈ ಸಮಯದಲ್ಲಿ ಒಂದು ನಾಯಿ ಬಂದಿತು. ಅದಕ್ಕೆ ಜಲಬಾಧೆಗೆ ಅವಸರವಾಗಿತ್ತು. ಸಾಮಾನ್ಯವಾಗಿ ನಾಯಿಗಳಿಗೆ ಆಸರೆ ಇಲ್ಲದಿದ್ದರೆ ಜಲ ಬಾಧೆ ಮಾಡಲು ಬರುವುದಿಲ್ಲ. ನಾಯಿಯು ಅತ್ತಿಂದ ಇತ್ತ ನೋಡಿ ಒಲೆಯ ಪಕ್ಕದಲ್ಲಿದ್ದ ಅನ್ನದ ತಪ್ಪಲೆಯ ಮೇಲೆ (ಒಂದು ಕಾಲು ಎತ್ತಿ) ಜಲಬಾಧೆ ಮಾಡಿತು. ಆಚಾರ್ಯರಿಗೆ ಕೋಪ ನೆತ್ತಿಗೇರಿತು. ಆಗಲೇ ಒಂದು ಗಂಟೆಯಾಗಿತ್ತು. ಹೊಟ್ಟೆಯಲ್ಲಿ ತೋಳಗಳ ಗುಂಪೇ ಹೊಯ್ದಾಟ ನಡೆಸಿದ್ದವು. ನಾಯಿಯ ಮೇಲೆ ಸೇಡು ತೀರಿಸಿಕೊಳ್ಳಲು ಮನಸ್ಸು ಮಾಡಿದರು. ನಾಯಿಯು ತಾನು ಮಾಡಬಾರದ ಕೆಲಸವನ್ನು ಮಾಡಿ ಆಗಲೇ ಮುಂದೆ ಹೆಜ್ಜೆ ಹಾಕಿತು.

ಆಚಾರ್ಯರು ತಟ್ಟೆಯಲ್ಲಿದ್ದ ಒಂದೊಂದೆ ಸಾಲಿಗ್ರಾಮದಿಂದ ನಾಯಿಗೆ ಹೊಡೆದರು. ಒಂದರಿಂದಲೂ ಏಟು ತಗಲಲಿಲ್ಲ. ಅವರ ಕೋಪ ಇನ್ನೂ ಹೆಚ್ಚಾಯಿತು. "ಮೂವತ್ತು ವರ್ಷಗಳಿಂದ ನಿಮಗೆ ಒಂದೇಸಮನೆ ನೀರು ಹೊಯ್ದದ್ದು ವ್ಯರ್ಥವಾಯಿತು" ಎಂದು ಹೇಳುತ್ತ ಹನುಮಂತದೇವರ ವಿಗ್ರಹವನ್ನು ಕೈಗೆ ತೆಗೆದುಕೊಂಡರು.

ವಿಗ್ರಹವು ಕೈಗೆ ಒಳ್ಳೇ ಈಡಾಗಿತ್ತು. ಓಡಿ ಹೋಗುತ್ತಿದ್ದ ಶುನಕನ ಮೇಲೆ ಎಸೆದರು. ಅದು ಸರಿಯಾಗಿ ನಾಯಿಯ ತಲೆ ಬುರುಡೆಗೆ ಬಿದ್ದಿತು. ನಾಯಿ "ಖೊಯ್ಯ್" ಎನ್ನುತ್ತ ಮೂರು ಸಾರಿ ಸುತ್ತಿ ಬಿದ್ದಿತು. ಆಚಾರ್ಯರ ಸಂತೋಷಕ್ಕೆ ಪಾರವೇ ಇರಲಿಲ್ಲ. "ಭಪ್ಪರೇ ಹನುಮಾ ! ನೀನೊಬ್ಬನೇ ಸೈ. ಅನೇಕ ರಾಕ್ಷಸರನ್ನು ಕೊಂದ ನೀನು ಆ ಶ್ವಾನರಾಕ್ಷಸನನ್ನು ಕೊಂದೆ ! " ಎಂದು ಹೇಳಿದರು.

*                    *                    *

''ದೆಗಡಿ ಆಗಿದೆ, ಒದ್ದು ಜುಟಗೆ ದೆಶ್ಯಕೊಡಿ''

''ಲಗ್ಗೇ ಇಲ್ಲ ಲಿಗ್ಗಲ್ಲಿದ್ದ ಕೊಡಲಿ''

*                    *                    *

''ಯಾಕೆ ತುಂಬಾ ಶೀತವಾಗಿರುವಹಾಗಿದೆಯಲ್ಲ ?''

''ಹೋಟಲು ಹಾಲು ಹೆಚ್ಚು ಕುಡಿದಿದ್ದೇ ಕಾರಣವಿರಬೇಕು''

*                    *                    *

''ನಿಮ್ಮ ಯಜಮಾನರು ಮೇಷ್ಟರು ಎಂಬುದು ನನಗೆ ಗೊತ್ತು. ಆದರೆ ಹೊಟ್ಟೆಪಾಡಿಗೆ ಏನು ಮಾಡುತ್ತೀರಿ ?''

*                    *                    *

ಮಧ್ಯಾಹ್ನ ೩-೩ಂಕ್ಕೆ ಮ್ಯೂಟನಿ !

## "ನಾಯಿ ಮಾರಾಟಕ್ಕಿದೆ ''

''ನಿಮ್ಮ ಮನೆ ಅಡ್ರೆಸ್ ಕೊಟ್ಟು 'ನಾಯಿ ಮಾರಾಟಕ್ಕಿದೆ' ಅಂತ ಪತ್ರಿಕೇಲಿ ಕೊಟ್ಟಿದ್ದರು. ನಾಯಿ ಎಲ್ಲಿ ?"

''ಹೋಗಿ, ನಮ್ಮ ಯಜಮಾನ್ರನ್ನ ನೋಡಿ".

* * *

## ದೊಡ್ಡ ಮನುಷ್ಯರಲ್ಲ

"ನೋಡೇ ಚೆನ್ನಿ, ಯಾರೋ ಬಂದಹಾಗಿದೆ"

''ಯಾರೂ ಇಲ್ಲಮ್ಮ, ಯಜಮಾನ್ರು ಛತ್ರಿ ಬಿಟ್ಟುಹೋಗಿದ್ದರು, ತಗೊಂಡು ಹೋಗಲು ಬಂದಿದ್ರು, ನಾನು ಸಹ ಯಾರೋ ದೊಡ್ಡ ಮನುಷ್ಯರು ಅಂತ ತಿಳಿದಿದ್ದೆ.''

* * *

## ಒಳ್ಳೆಯ ವರ ಸಿಕ್ಕದಿದ್ದರೆ..........

ಒಬ್ಬ ಶ್ರೀಮಂತರ ಸುಂದರ ಹುಡುಗಿಯಲ್ಲಿ ಒಬ್ಬ ಸಾಮಾನ್ಯ ಯುವಕ ಮೋಹಿತನಾದ. ಆ ಹುಡುಗಿಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಶ್ರೀಮಂತರನ್ನು ಕೇಳಿಕೊಂಡ. ಅವರು ಯುವಕನನ್ನು ಆಪಾದಮಸ್ತಕ ಪರ್ಯಂತ ಒಂದು ಬಾರಿ ನೋಡಿ,

"ಅಲ್ಲಿ ಇಲ್ಲಿ ಹುಡುಗಿಗೆ ವರ ಹುಡುಕುತ್ತಿದ್ದೇವೆ, ಎಲ್ಲಿಯೂ ಒಳ್ಳೆಯ ವರ ಸಿಕ್ಕದಿದ್ದರೆ ನಿನಗೇ ಕೊಟ್ಟು ಮದುವೆಮಾಡುತ್ತೇವೆ, ನಿನ್ನ ಅಡ್ರೆಸ್ ಕೊಟ್ಟು ಹೋಗಿರು'' ಎಂದು ಹೇಳಿದರು.

* * *

# ವಿದ್ಯಾರ್ಥಿಗಳಿಗೆ ಹಿತೋಕ್ತಿ

ವಿದ್ಯಾರ್ಥಿಗಳು ಬರೀ ಅದೃಷ್ಟದ ಮೇಲೆ ಅವಲಂಬಿಸಬಾರದು. ಪರೀಕ್ಷೆಯಲ್ಲಿ ಅವರು ಒಂಬತ್ತು ಪ್ರಯತ್ನಗಳನ್ನೂ ಮಾಡಿ ಕೊನೆಯ ಒಂದನ್ನು ಅದೃಷ್ಟಕ್ಕೆ ಬಿಡಬೇಕು.

ಪರೀಕ್ಷೆಯು ಇನ್ನು ಮೂರು-ನಾಲ್ಕು ತಿಂಗಳು ಇದೆಯೆನ್ನುವುದಕ್ಕೆ ಮುಂಚೆಯೇ ಯಾವ ಯಾವ ಪ್ರಶ್ನಪತ್ರಿಕೆಗಳನ್ನು ಯಾರು ಯಾರು ಕೊಡುತ್ತಾರೆಂಬುದನ್ನು ತಿಳಿದುಕೊಂಡು, ಪರೀಕ್ಷೆಗೆ ಮುಂಚೆಯೇ ಆ ಪ್ರಶ್ನಪತ್ರಿಕೆಗಳನ್ನು ಹೇಗೆ ವಶಪಡಿಸಿಕೊಳ್ಳಬೇಕೆಂಬ ಬಗ್ಗೆ ಸತತ ಪ್ರಯತ್ನ ನಡೆಯಿಸಬೇಕು.

ಇದಕ್ಕಿರುವ ಒಂದೆರಡು ಮಾರ್ಗಗಳನ್ನು ಸೂಚಿಸಲಾಗಿದೆ. ಉಳಿದ ಮಾರ್ಗಗಳನ್ನು ಚೂಟಿ ವಿದ್ಯಾರ್ಥಿಗಳು ತಾವೇ ಹುಡುಕಿಕೊಳ್ಳಬೇಕು.

ಪರೀಕ್ಷಕರಿಗೆ ಮಕ್ಕಳೆಷ್ಟು, ಅವರು ಯಾವ ತರಗತಿಗಳಲ್ಲಿ ಓದುತ್ತಿದ್ದಾರೆ. ಅವರಲ್ಲಿ ಯಾರನ್ನು ಹಿಡಿದರೆ ತಮ್ಮ ಕೆಲಸ ಸಾಧಿತವಾಗುತ್ತದೆ ಎಂಬುದನ್ನು ತಿಳಿಯಬೇಕು. ಪರೀಕ್ಷಕರಿಗೆ ಯಾವ ತಿಂಡಿ ತಿನಸುಗಳು ಪ್ರೀತಿ, ಅವರ ಗೀಳು ಏನು ಎಂಬುದನ್ನು ತಿಳಿದುಕೊಂಡು, ಅದನ್ನು ಒದಗಿಸಿ ಪ್ರಶ್ನಪತ್ರಿಕೆ ಹೊಡೆಯುವುದು ಈ ಮಾರ್ಗಗಳಲ್ಲಿ ಕೆಲವು.

ಪರೀಕ್ಷೆಯ ಪ್ರಶ್ನಪತ್ರಿಕೆಗಳು ದೊರೆಯದಿದ್ದಾಕ್ಷಣ ವಿದ್ಯಾರ್ಥಿಗಳು ನಿರಾಶರಾಗಬೇಕಾದ ಕಾರಣವಿಲ್ಲ. ಆಯಾ ಪರೀಕ್ಷೆಯಿದ್ದ ದಿನ, ಮುಖ್ಯ ಪ್ರಶ್ನೆಗಳು (ಅಂದರೆ ಬರಬಹುದಾದ ಪ್ರಶ್ನೆಗಳು) ಯಾವುವೆಂಬುದನ್ನು ಬುದ್ಧಿವಂತ ವಿದ್ಯಾರ್ಥಿಗಳಿಂದ ತಿಳಿದು, ಅವಕ್ಕೆ ಟೆಕ್ಸ್ಟ್‌ನಿಂದಲೋ, ನೋಟ್ಸ್‌ನಿಂದಲೋ ಉತ್ತರಗಳನ್ನು ಬರೆದುಕೊಂಡು ಹೋಗಿ ಅವನ್ನು ಪರೀಕ್ಷೆಯ ಕಾಲದಲ್ಲಿ ಭಟ್ಟಿ ಇಳಿಸುವುದು. ಮತ್ತು ನಿಮ್ಮ ಎಡಬಲಗಳಲ್ಲಿ ಕುಳಿತಿರುವ ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳನ್ನು ಕಾಪಿ ಹೊಡೆಯುವುದೂ ಒಂದು ಮಾರ್ಗ. ನಿಮ್ಮ ಕಣ್ಣು ಯಾವಾಗಲೂ ನಿಮ್ಮ ನೆರೆ ವಿದ್ಯಾರ್ಥಿಗಳ

ಉತ್ತರಪತ್ರಿಕೆಗಳ ಮೇಲಿದ್ದರೆ ಸೂಪರ್‌ವೈಸರರ ಗಿಡುಗ ಕಣ್ಣಿಗೆ ನೀವು ಆಹುತಿ ಆಗುತ್ತೀರಿ. ಆದ್ದರಿಂದ ಕಣ್ಣುನೋವೆಂದು ಕೂಲಿಂಗ್ ಗ್ಲಾಸ್ (ಗಾಗಲ್ಸ್) ಹಾಕಿ. ಕಣ್ಣುನೋವು ನಿಜವಾಗಿಯೂ ಬರುವಂತಾಗಲು ಬಿಟ್ಟು ಬಿಡದೆ, ಪರೀಕ್ಷೆ ಆಗುವ ಹಿಂದಿನ ಮೂರು ದಿನ ಎರಡನೆ ಷೋ ಸಿನಿಮಾಕ್ಕೆ ಹೋಗಿ.

ಈ ಪ್ರಯತ್ನಗಳಲ್ಲಿಯೂ ನೀವು ಸಾಕಷ್ಟು ಸಾಫಲ್ಯರಾಗ ದಿದ್ದರೆ ಇನ್ನೊಂದು ಮಹತ್ವದ ಪ್ರಯತ್ನವಿದೆ. ಏನೆಂದರೆ ನಿಮ್ಮ ಉತ್ತರ ಪತ್ರಿಕೆಗಳು ಯಾರಲ್ಲಿಗೆ ಹೋಗುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕು. ಮತ್ತು ನೀವು ಯಾವ ಪತ್ರಿಕೆಗಳಲ್ಲಿ ಸಾಕಷ್ಟು ನಂಬರುಗಳನ್ನು ಪಡೆದಿಲ್ಲ ವೆಂದು ನಿಮಗೆ ಮಂದಟ್ಟಾಗಿದೆಯೊ, ಆ ಉತ್ತರಪತ್ರಿಕೆಯ ಪರೀಕ್ಷಕರನ್ನು ತಾಗಬೇಕು. ಸಾಮಾನ್ಯವಾಗಿ ಉಪಾಧ್ಯಾಯರಿಗೆ ಮಕ್ಕಳು ಹೆಚ್ಚು. ಅದ ರಂತೆಯೇ ಬಡತನವೂ ಸಹ. ಮದುವೆಯಾಗದೆ ಒಂದೆರಡು ಹೆಣ್ಣುಗಳು ಅವರ ಮನೆಯಲ್ಲಿ ಹೇಗೂ ಇರುತ್ತವೆ. ಅದರಲ್ಲಿ ಸ್ವಲ್ಪ "ಹೂ" ಎನ್ನ ಬಹುದಾದ ಕನ್ಯೆಯನ್ನು **ವರದಕ್ಷಿಣೆ ಇಲ್ಲದೆ** ಮದುವೆಯಾಗುವುದಾಗಿ ಹೇಳಿ. ಮದುವೆ ಮಾಡಲು ಸಾವಿರ ಸುಳ್ಳುಗಳನ್ನು ಹೇಳಬೇಕಂತೆ, ಮದು ವೆಯಿಂದ ಪಾರಾಗಲು, ಬೇಡದ ಕನ್ಯೆಯನ್ನು ನಿರಾಕರಿಸಲು ಹತ್ತುಸಾವಿರ ಸುಳ್ಳುಗಳನ್ನು ಹೇಳಿದರೂ ತಪ್ಪಲ್ಲ. ಇದೂ ಸಾಧ್ಯವಾಗದಿದ್ದರೆ ಆ ಪರೀಕ್ಷಕರ ಅಳಿಯಂದರಿಂದ ನಿಮ್ಮ ಉತ್ತರಪತ್ರಿಕೆಗೆ ಹೆಚ್ಚು ನಂಬರುಗಳನ್ನು ತುಂಬು ವಂತೆ ಹೇಳಿಸಿ. ಸ್ಥಾಧ್ಯವಾದರೆ ಮಲೆನಾಡಿನಿಂದ ಹೇಗಾದರೂ ೫೦ ಸೇರು ಸಣ್ಣಕ್ಕಿಯನ್ನು ತರಿಸಿ ಪರೀಕ್ಷಕರು ಮನೆಯಲ್ಲಿಲ್ಲದ ಸಮಯ ನೋಡಿ ತೆಗೆದು ಕೊಂಡುಹೋಗಿ ಹಾಕಿ, ಅವರ ಹೆಂಡತಿಯ ಕೈಗೆ ನಿಮ್ಮ ರಿಜಿಸ್ಟರ್ ನಂಬರ್ ಕೊಟ್ಟು ಬನ್ನಿ.

ನಾನು ಸೂಚಿಸಿರುವ ಇಷ್ಟು ಪ್ರಯತ್ನಗಳಲ್ಲಿ ಯಾವುದಾದರೂ ಒಂದನ್ನು ನೀವು ಚೆನ್ನಾಗಿ ಸಾಧಿಸಿದರೆ ಖಂಡಿತವಾಗಿಯೂ ಉತ್ತೀರ್ಣ

ರಾಗುತ್ತೀರಿ. ಏನೋ ದುರದೃಷ್ಟದಿಂದ ಆಗಲಿಲ್ಲ ಅನ್ನಿ, ನಮ್ಮಂತಹ ನಾಲ್ಕು ಜನ ವಿದ್ಯಾರ್ಥಿ ಹಿತರಕ್ಷಕರನ್ನು ಕರೆಸಿ ಒಳ್ಳೆಯ ಊಟ ಹಾಕಿಸಿ, ಇನ್ನೊಂದು ಬಾರಿ ಪ್ರಯತ್ನಿಸಿ

* * *

ಬನಾರಸ್ ಪೌರಸಭೆಯು ಆದಾಯ ಹೆಚ್ಚಿಸಲು ಅಲ್ಲಿಯ ವೇಶ್ಯೆಯರ ಮೇಲೂ ತೆರಿಗೆ ಹಾಕಿದ್ದಾರೆ.

—ಸರಿ, ತೆರಿಗೆ ಬೀಳುವುದು ಅವರ ಮನೆಗೆ ಬರುವ ವಿಟಪುರುಷರ ಮೇಲೆ, ಅಷ್ಟೇ.

* * *

ಬೆಂಗಳೂರಿನಲ್ಲಿ ಡಿ. ಡಿ. ಟಿ. ತಯಾರಿಸುವ ಕಂಪನಿಯೊಂದನ್ನು ಸ್ಥಾಪಿಸುವ ಆಲೋಚನೆ ಸರ್ಕಾರಕ್ಕಿದೆಯಂತೆ.

—ಹಾಗಾದರೆ ಕಾಂಗ್ರೆಸ್ ಶುದ್ಧೀಕರಣ ಬಹಳ ಸುಲಭವಾಗಿ ಇದರಿಂದ ಆಗಲು ಸಾಧ್ಯವಾದೀತು.

* * *

ಸೈನಿಕರು ನಾಟಕ ಮತ್ತಿತರ ವಿನೋದಕೂಟಗಳಲ್ಲಿ ಸ್ತ್ರೀವೇಷ ಹಾಕಿದರೂ, ಅವರುಗಳ ಭಾವಚಿತ್ರಗಳನ್ನು ಎಲ್ಲೂ ಪ್ರಕಟಿಸಕೂಡದೆಂದು ಕೇಂದ್ರ ಸರ್ಕಾರದ ಆಜ್ಞೆ.

—ಯಾಕೆ, ಅವು ಅಷ್ಟು ಅಸಹ್ಯಕರವಾಗಿರುತ್ತವೇನು ?

* * *

## ಅವನಿಗೆ ತಿಳಿದ ಭಾಷೆ

ಒಂದು ಸಂಜೆ ಒಬ್ಬ ಪೋಲೀಸ್ ಕಾನ್‌ಸ್ಟೇಬಲ್ಲನು, ಒಂದು ಗುಡ್ಡದ ಬಳಿ ದಾರಿ ತಪ್ಪಿದ ಎತ್ತ ಸುತ್ತಿ ಸುತ್ತಿ ಬಂದರೂ ಮತ್ತೆ ಮೊದಲು ಹೊರಬಿದ್ದ ಸ್ಥಳಕ್ಕೇ ಬರುತ್ತಿದ್ದ ದೂರದಲ್ಲಿ ಒಬ್ಬ ಕುರಿಗಳನ್ನು ಕಾಯುತ್ತಿದ್ದ. ಕಾನ್‌ಸ್ಟೇಬಲ್ ಅವನಲ್ಲಿಗೆ ಹೋಗಿ "ಅಯ್ಯಾ ನರಗೂರಿಗೆ ಹೋಗುವ ದಾರಿ ಯಾವುದು ?" ಎಂದು ಕೇಳಿದ ಕುರಿ ಕಾಯುವವನು ಕಮುಕ್ ಕಿಮುಕ್ ಅನ್ನಲಿಲ್ಲ. ಪೋಲೀಸಿನವನು ಮೂರು ನಾಲ್ಕು ಸಾರಿ ಕೇಳಿದ ಅದಕ್ಕೂ ಅವನು ಬಾಯಿ ಬಿಡಲಿಲ್ಲ. ಪೋಲೀಸಿನವನಿಗೆ ತುಂಬಾ ಸಿಟ್ಟು ಬಂದಿತು. "ಹೇಳುತ್ತೀಯೋ ಇಲ್ಲೋ ಸೂ ... ನುಗನೇ" ಅಂದವನೇ ಕೈಲಿದ್ದ ಬೆತ್ತದಿಂದ ಎರಡು ಸಾರಿ ಥಳಿಸಿದ ಕುರಿ ಕಾಯುವವನು ಕುಯ್ಯೋ ಮರ್ರೋ ಅನ್ನುತ್ತ "ನನ್ನೊಡೆಯ, ಈ ಕೆಲ್ಸ ಮೊದ್ಲೇ ಮಾಡಿದ್ರೆ, ಆಗ್ಲೇ ದಾರಿ ತೋರ್‍ಸ್ತಿದ್ದೆ" ಅಂತ ಹೇಳಿದ.

* * *

ಒಬ್ಬ ಶ್ರೀಮಂತನಿಗೆ ಬಹಳ ವರ್ಷಗಳವರೆಗೆ ಮಕ್ಕಳಾಗಲಿಲ್ಲ ಅವನು ಒಬ್ಬ ಯೋಗೀಶ್ವರನಿಗೆ ಅಡ್ಡಬಿದ್ದು ವರ ಕರುಣಿಸಬೇಕೆಂದು ಕೇಳಿಕೊಂಡ. ಯೋಗಿಗಳು ಸ್ವಲ್ಪ ಹೊತ್ತು ಧ್ಯಾನಕ್ಕೆ ಕುಳಿತು, "ನೀವು ಮೇಸ್ಟ್ರರ ಕೆಲಸಕ್ಕೆ ಅರ್ಜಿ ಹಾಕಿ, ನಿಮಗೆ ಮಕ್ಕಳಾಗುತ್ತವೆ" ಎಂದು ಹೇಳಿದರು.

ಆದರಂತೆ ಶ್ರೀಮಂತನು ಮೇಸ್ಟ್ರರ ಕೆಲಸಕ್ಕೆ ಅರ್ಜಿ ಹಾಕುತ್ತಲೇ ಅವನ ಹೆಂಡತಿ ಗರ್ಭವತಿಯಾದಳು.

* * *

## ಹಕೀಮರ ಮಾತ್ರೆ

ಒಬ್ಬನಿಗೆ ಮಲಬದ್ಧತೆಯಾಯಿತು ಅದರ ನಿವಾರಣೆಗೆ ಔಷಧಿ ತೆಗೆದುಕೊಳ್ಳಲು ಅದೇ ಊರಿನಲ್ಲಿದ್ದ ಹಕೀಮನಲ್ಲಿಗೆ ಹೋದ. ಹಕೀಮ ಒಂದು ಅತಿ ದೊಡ್ಡ ಕರಿ|ಗುಳಿಗೆಯನ್ನು ಕೊಟ್ಟ. ಅದು ಒಂದು ಗಜ ನಿಂಬೆಹಣ್ಣಿನ ಗಾತ್ರದಷ್ಟಿತ್ತು. ರೋಗಿಗೆ ಗಾಬರಿಯಾಯಿತು. ಇಷ್ಟು ದೊಡ್ಡ ಮಾತ್ರೆ ತಿಂದರ ತನ್ನ ಗತಿಯೇನು, ಅಂತ ಅನುಮಾನಪಟ್ಟು ಕೊಂಡ. "ನೀ ಯಾಕೆ ಹೆದರ್ತೀ, ನೋಡ್ ನಾನ್ ತಿನ್ತೀನಿ" ಅಂತ ಹಕೀಮ ಹೇಳುತ್ತ ಎರಡು ಗುಳಿಗೆಗಳನ್ನು ತಿಂದ ಇದನ್ನು ನೋಡಿದ ರೋಗಿಗೂ ಸಮಾಧಾನವಾಯಿತು.

ರೋಗಿ ಮನೆಗೆ ಬಂದನನೇ ಹಕೀಮ ಕೊಟ್ಟಿದ್ದ ಗುಳಿಗೆಯಲ್ಲಿ ಕಾಲು ಭಾಗವನ್ನು ಮಾತ್ರ ತೆಗೆದುಕೊಂಡ ಏನಾದರೂ ಹೆಚ್ಚು ಕಡಿಮೆ ಆದರೆ ಹೇಗೆ ಅಂತ ಅನುಮಾನದಿಂದಲೇ ಈ ರೀತಿ ಮಾಡಿದ

ಮಾತ್ರೆ ತಗೆದುಕೊಂಡ ಸ್ವಲ್ಪ ಹೊತ್ತಿನ ನಂತರ ರೋಗಿ ಬಹಿರ್ದೇಶಕ್ಕೆ ಹೋದ ಒಂದು, ಎರಡು, ಮೂರು, ನಾಲ್ಕು ಬಾರಿ ಹೋದ ದೇಹದ ಕಶ್ಮಲವೆಲ್ಲಾ ತೊಳೆದುಹೋಯಿತೆಂದೂ, ಹಕೀಮನ ಔಷಧಿ ರಾಮಬಾಣ ದಂತೆ ಕೆಲಸಮಾಡಿತೆಂದೂ, ಸಮಾಧಾನ ಪಟ್ಟುಕೊಂಡ.

ಆದರೆ ಐದು, ಆರು, ಏಳನೇ ಬಾರಿ ಹೋದಾಗ ಅವನಿಗೆ ದಿಗಿಲಾ ಯಿತು ಮನೆಯವರೆಲ್ಲ ಗಾಬರಿಪಟ್ಟುಕೊಂಡರು. ನಿಶ್ಶಕ್ತಿ ಹೆಚ್ಚಾದುದ ರಿಂದ ಹಾಸಿಗೆ ಹಾಸಲು ಹೇಳಿದ. ಹಾಸಿಗೆಯಲ್ಲಿಯೇ ನಾಲ್ಕೈದು ಬಾರಿ ಹೋದ. ಮೊದಲು ರಕ್ತ ಹೋಗಲಾರಂಭಿಸಿ, ಕರುಳು ಕತ್ತರಿಸುವುದಕ್ಕೂ ಪ್ರಾರಂಭವಾಯಿತು.

ಔಷಧಿಕೊಟ್ಟ ಹಕೀಮನನ್ನು ಹುಡುಕಿ ಅವನಿಂದಲೇ ಉಪಶಮನ

ಔಷಧಿ ತರಲು ಯಾರೋ ಸೂಚಿಸಿದರು. ಅದರಂತೆ ಹಕೀಮನ ಮನೆಗೆ ಜನ ಹೊರಟಿತು. ಆವನ ಮನೆಗೆ ಬೀಗ ಹಾಕಿತ್ತು. ಅವನಿಗಾಗಿ ಊರಿನ ಸಂದುಗೊಂದುಗಳೆಲ್ಲಾ ಹುಡುಕಿದರು. ಎಲ್ಲಿಯೂ ಹಕೀಮನ ಪತ್ತೆಯಿಲ್ಲ.

ಹಕೀಮನನ್ನು ಹುಡುಕಿ ಹುಡುಕಿ ಜನ ಸುಸ್ತಾದರು. ಕೊನೆಗೆ ಕೆರೆಯ ಹತ್ತಿರ ಏನಾದರೂ ಇರಬಹುದೋ ಎಂದು ಹೊರಟರು. ಕೆರೆಯ ತೂಬಿಗೆ ಹಕೀಮ ಆತುನಿಂತುಕೊಂಡಿದ್ದ.

"ಬೆಳಿಗ್ಗೆ ನೀವು ಜುಲಾಬಿಗೆ ಗುಳಿಗೆ ಕೊಟ್ಟಿದ್ದರಲ್ಲ, ಅವನು ಬದುಕುವ ಹಾಗಿಲ್ಲ, ಏನಾದರೂ ಔಷಧಿ ಕೊಡಿ" ಎಂದು ಕೇಳಿದರು.

"ಅರೇ ಅವ್ನು ಸ್ವಲ್ಪ ತಿಂದಿದಾನೆ. ನಾನ್ ಎರ್ಡ್ ಗುಳ್ಗೆ ತಿಂದಿದೀನಿ ನಾನೂ ಸಾಯ್ತಾ ಇದೀನಿ'' ಅಂತ ಹಕೀಮ ಹೇಳಿದ.

* * *

ಇಷ್ಟು ಸಾಲವನು ಮಾಡಿದ್ದು ಸಾಕೋ।
ಸೃಷ್ಟೀಶ ನೀನೆಲ್ಲ ತೀರಿಸಬೇಕೋ॥

* * *

"ಎಲ್ಲಿ ಹೋಗಿದ್ದೆಯೋ ಮಗು, ಸಂಜೆಯಿಂದ ಪತ್ತೆಯೇ ಇಲ್ಲ''
''ಬದುಕುವ ಮಾರ್ಗಕ್ಕೆ ಹೋಗಿದ್ದೆನಮ್ಮ''
''ಈಗಲಾದರೂ ಬುದ್ಧಿ ಬಂತಲ್ಲ, ಸಾಕು ಬಿಡು"
"ಹೌದಮ್ಮ "ಬದುಕುವ ಮಾರ್ಗ'' ಚಿತ್ರ ಚೆನ್ನಾಗಿತ್ತು.''

* * *

ಪತ್ರಿಕೆ ಹೊರಡಿಸಿ ನೋಡು, ಬಾಡಿಗೆ ಮನೆ ಹುಡುಕಿ ನೋಡು.

ಈ ವರ್ಷವೆಲ್ಲಾ ನ್ಯೂಸ್‌ಪ್ರಿಂಟ್ ಕಾಗದಕ್ಕೆ ಅಭಾವವಾಗುವುದೆಂದು ಹೇಳಲಾಗಿದೆ.

—ಇದರಂತೆಯೇ ನಮ್ಮ ನಾಯಕರು ತಮ್ಮ ಭಾಷಣಗಳಲ್ಲಿ ಮತ್ತು ಹೇಳಿಕೆಗಳಲ್ಲಿ ಅಭಾವ ಮಾಡಿಕೊಂಡರೆ ಪತ್ರಿಕೆಯವರು ಬದುಕುತ್ತಾರೆ.

* * *

"ನೀವು ಎಂಥ ವಿಮಾನದಲ್ಲಿ ಪ್ರಯಾಣಮಾಡಬೇಕು ಅಂತ ಆಸೆಯಿದೆ ? "

"ಮಂತ್ರಿಗಳು ಪ್ರಯಾಣಮಾಡುವ ವಿಮಾನದಲ್ಲಿಯೇ ನಾನು ಪ್ರಯಾಣಮಾಡಬೇಕು ಅಂತ ಆಸೆ, ಏಕೆಂದರೆ ಉಳಿದ ವಿಮಾನಗಳಂತೆ ಅದು ಅಪಘಾತಕ್ಕೀಡಾಗುವದಿಲ್ಲ"

* * *

ಬ್ರಿಟಿಷ್‌ಚಕ್ರವರ್ತಿಗಳ ಪಟ್ಟಾಭಿಷೇಕ ಮಹೋತ್ಸವ ಜರುಗುವ ಕಲ್ಲು ಚಪ್ಪಡಿಯನ್ನು ಯಾರೋ ಕದ್ದುಕೊಂಡು ಹೋಗಿದ್ದಾರೆ.

—ಮನೆ ಮುಂದಿರುವ ಮುನ್ಸಿಪಲ್ ಚರಂಡಿಯ ಮೇಲಿರುವ ಕಲ್ಲು ಚಪ್ಪಡಿಗಳನ್ನೇ ಕದಿಯುತ್ತಾರಂತೆ, ಇನ್ನು ಅದನ್ನು ಬಿಟ್ಟಾರೇ ?

* * *

ಜೆಕೋಸ್ಲೊವೇಕಿಯಾದಲ್ಲಿ ಹದಿನೇಳರಿಂದ ಇಪ್ಪತ್ತೆರಡು ವರ್ಷದೊಳಗಿರುವ ಹುಡುಗಿಯರನ್ನು ಸವಾರಸೇನೆಗೆ ಸೇರಿಸಿಕೊಳ್ಳಲಾಗಿದೆಯಂತೆ.

—ಈಗಿನಿಂದಲೇ ಹುಡುಗಿಯರು ಸವಾರಿ ಆರಂಭಿಸಿದರೆ, ಅವರು ಲಗ್ನವಾದಮೇಲೆ ಅವರ ಗಂಡಂದಿರ ಗತಿ ಯಾತಕ್ಕೂ ಬೇಡ !

* * *

ನೇಪಾಳದಲ್ಲಿ ರಣರಂಗವೊಂದಿರುವಂತೆ ರಾಣಾರಂಗವೂ ಒಂದಿದೆಯಂತೆ.

* * *

ಮಂತ್ರಿಸಿದರೆ ಮಂತ್ರಿಮಂಡಲ ಉರುಳೀತೆ !

## ೫ ರೂಪಾಯಿ ತಂದೆ !

ಮೊಕದ್ದಮೆಯೊಂದರಲ್ಲಿ ಒಬ್ಬನು ಸಾಕ್ಷಿ ಹೇಳಬೇಕಾಗಿತ್ತು. ನ್ಯಾಯಾಧೀಶರು ಸಾಕ್ಷಿಯ ಹೆಸರೇನೆಂದು ಕೇಳಿದರು. ಅವನು ಹೇಳಿದ. ಅನಂತರ ಅವನ ತಂದೆಯ ಹೆಸರೇನೆಂದು ಕೇಳಿದರು. ಸಾಕ್ಷಿಯು ತನ್ನ ಜೇಬಿನಿಂದ ಒಂದು ೫ ರೂಪಾಯಿ ನೋಟನ್ನು ಹೊರತೆಗೆದು "ನನ್ನ ತಂದೆಯ ಹೆಸರು ೫ ರೂಪಾಯಿ" ಎಂದು ಹೇಳಿದ. ನ್ಯಾಯಾಧೀಶರಿಗೆ ಆಶ್ಚರ್ಯವಾಯಿತು. "ಎಲ್ಲಿಯಾದರೂ ತಂದೆಯ ಹೆಸರು ೫ ರೂಪಾಯಿ ಅಂತ ಇರುತ್ತದೆಯೇ ?" ಅಂತ ಕೇಳಿದರು. ಅದಕ್ಕೆ ಸಾಕ್ಷಿಯು, "ನನ್ನ ತಾಯಿ ವೇಶ್ಯೆ. ಮನೆಗೆ ಬರುವವರಿಂದ ೫ ರೂಪಾಯಿ ತೆಗೆದುಕೊಳ್ಳುತ್ತಿದ್ದಳು. ನನ್ನ ತಂದೆ ಯಾರೆಂಬುದು ನನಗೂ ಗೊತ್ತಿಲ್ಲ, ನನ್ನ ತಾಯಿಗೂ ಗೊತ್ತಿಲ್ಲ. ಆದ್ದರಿಂದ ಸಾಂಕೇತಿಕವಾಗಿ ೫ ರೂಪಾಯಿಯೇ ನನ್ನ ತಂದೆಯೆಂದು ಕರೆಯುತ್ತೇನೆ" ಅಂತ ಹೇಳಿದ.

* * *

## ನನಗೂ ಸಾಧ್ಯವಿಲ್ಲ

"ನೀನು ಎರಡು ಮಗ್ಗಿ ಹೆಂಡ ಕುಡಿತೀನಿ ಅಂತ ಹೇಳ್ತೀಯ, ನನ್ನಿಂದ ಎರಡು ಮಗ್ಗಿ ನೀರು ಕುಡಿಯೋಕೆ ಸಹ ಆಗೋಲ್ಲ"

"ಹೌದು ನನಗೂ ನೀರು ಕುಡಿಯೋಕೆ ಆಗೋಲ್ಲ"

* * *

## ಮುನ್ನೆಚ್ಚರಿಕೆ

ಮಾರ್ವಾಡಿಯೊಬ್ಬನು ತನ್ನ ಹಳ್ಳಿಯಿಂದ ಹೆಂಡತಿಯೊಂದಿಗೆ ನೆರೆ ಊರಿನ ಜಾತ್ರೆಗೆ ಹೊರಟನು. ಹೆಂಡತಿಯು ರೊಟ್ಟಿ ಬುತ್ತಿಯ ಗಂಟನ್ನು ಹಿಡಿದುಕೊಂಡಿದ್ದಳು. ಜಾತ್ರೆ ಸಮೀಪಿಸುತ್ತಲೇ ಮಾರ್ವಾಡಿ ಹೇಳಿದ "ಗಲಾಟೆಯಲ್ಲಿ ನೀನೇನಾದರೂ ತಪ್ಪಿಸಿಕೊಂಡರೆ ನಾನು ಉಪವಾಸವಿರಬೇಕಾಗುತ್ತದೆ. ರೊಟ್ಟಿ ಬುತ್ತಿ ಗಂಟನ್ನು ಇಲ್ಲಿ ಕೊಡು" ಎಂದವನೇ ಅವಳಿಂದ ಗಂಟನ್ನು ಕಿತ್ತುಕೊಂಡ.

## ಬೇಕಾದರೆ ಮಾಲಕರನ್ನು ಕೇಳಿ !

ಉತ್ತರ ಕರ್ನಾಟಕದ ಒಂದು ನಾಟಕ ಕಂಪನಿ ಅಂದು ರಾತ್ರಿ "ಸಂಪೂರ್ಣ ಕೃಷ್ಣಲೀಲೆ"ಯನ್ನು ಆಡಲಿದೆಯೆಂದು ಊರಿನ ಮೋಟು ಗೋಡೆಗಳ ಮೇಲೆಲ್ಲ ಬೋರ್ಡುಗಳು ರಂಜಿಸಿದ್ದವು ಆದರೆ ಆ ದಿನ ನಾಟಕ ಕಂಪನಿಯ ಮಾಲಿಕರಿಗೆ ಒಂದು ಸಣ್ಣ ತಲೆನೋವು ಉಂಟಾಯಿತು "ಸಂಪೂರ್ಣ ಕೃಷ್ಣಲೀಲೆ"ಯ ನಾಟಕದಲ್ಲಿ ಚಾಕರನೊಬ್ಬನು ಬಂದು ಕಂಸನಿಗೆ, "ದೇವಕೀದೇವಿಯ ಗರ್ಭದಲ್ಲಿ ಅಷ್ಟನು ಶಿಶು ಜನಿಸಿದೆ" ಎಂದು ವರದಿ ಮಾಡುವ ಒಂದು ಪ್ರಸಂಗ ಬರುತ್ತದೆ ಆದರೆ ಚಾಕರನ ಪಾತ್ರ ಹಾಕುವ ವನು ಅವನ ತಾಯಿಗೆ ಕಾಯಿಲೆಯೆಂದು ಆ ಬೆಳಿಗ್ಗೆಯೇ ರಜ ತೆಗೆದು ಕೊಂಡು ಊರಿಗೆ ಹೋಗಿದ್ದ.

ಸಮಯಸ್ಫೂರ್ತಿಯಲ್ಲಿ ನಾಟಕ ಕಂಪನಿ ಮಾಲಿಕರನ್ನು ಬಿಟ್ಟರೆ ಯಾರೂ ಇಲ್ಲ ಸ್ವಲ್ಪ ಹೊತ್ತು ಆಲೋಚಿಸಿ ಅಡಿಗೆಯವನನ್ನು ಕರೆಕಳುಹಿ ದರು

"ಚಾಕರನ ಪಾರ್ಟು ಮಾಡುತ್ತಿದ್ದ ಹನುಮ ರಜ ತೆಗೆದುಕೊಂಡು ಊರಿಗೆ ಹೋಗಿದ್ದಾನೆ ಅವನು ಹೇಳಬೇಕಾದ ಎರಡು ಮಾತನ್ನು ನೀನೇ ಹೇಳು"

"ನಂಗೆ ಅಭ್ಯಾಸಿಲ್ರೀ, ಅಲ್ಲಿ ಹೋಗಿ ನಿಂತ್ಕೊಂಡ್ರೆ ಹೆಂಗೆಂಗೋ ಆಗ್ತದ "

"ಏನೂ ಇಲ್ಲ ಹೋಗೋ, ಎರಡು ಮಾತು ಗಟ್ಟಿ ಮಾಡಿಬಿಡು "

ಅಡಿಗೆಯವನು ನಿರ್ವಾಹವಿಲ್ಲದೆ ಆ ರಾತ್ರಿ ಚಾಕರನ ಪಾರ್ಟು ಹಾಕಲು ಒಪ್ಪಲೇಬೇಕಾಯಿತು ಚಾಕರನ ಎರಡು ಮಾತುಗಳನ್ನು ಮಧ್ಯಾಹ್ನ ವೆಲ್ಲ ಕೂತು ಉರು ಹೊಡೆದ.

ರಾತ್ರಿ ನಾಟಕ ಆರಂಭವಾಯಿತು. ಕಂಸನಿಗೆ ದುಸ್ವಪ್ನವೊಂದು ಬಿದ್ದಿದೆ. ಅವನ ರುಂಡ ಒಂದು ಕಡೆ, ಮುಂಡ ಇನ್ನೊಂದು ಕಡೆ, ಕೈಕಾಲು ಗಳು ಮತ್ತೊಂದು ಕಡೆ ಬಿದ್ದಂತೆ ಸ್ವಪ್ನಬಿದ್ದಿದೆ. ಅವನು ಮಂಚದಿಂದ

ಕೆಳಕ್ಕೆ ಬೀಳುತ್ತಾನೆ. ಕಾಣದ ಶತ್ರುವನ್ನು ಹಿಡಿಯಲು "ನಿಲ್ಲೈ ದುರುಳನೆ ಛೀ, ಥೂ" ಎಂತ ಹಾಡು ಹೇಳುತ್ತ ರಂಗಸ್ಥಳದ ಮೇಲೆ ಸುತ್ತುತ್ತಿರುತ್ತಾನೆ.

ಈ ಸಮಯದಲ್ಲಿಯೇ ಚಾಕರನು ಬಂದು ದೇವಕೀದೇವಿಗೆ ಗಂಡು ಶಿಶು ಜನಿಸಿದ ವರ್ತಮಾನ ಹೇಳಬೇಕು. ಸರಿ ಅಡಿಗೆಯವನು ಬಂದ. "ಮಹಾ ಪ್ರಭು, ದೇವಕೀದೇವಿಯರ ಅಷ್ಟಮ ಗರ್ಭದಲ್ಲಿ ಗಂಡು ಶಿಶು ಜನಿಸಿದೆ" ಎಂದು ತಾನು ಗಟ್ಟಿ ಮಾಡಿದ ಮಾತುಗಳನ್ನು ಹೇಳಿದ.

ಚಾಕರನ ಮಾತನ್ನು ಕಂಸ ನಂಬುವದಿಲ್ಲ ಒರೆಯಲ್ಲಿನ ಖಡ್ಗವನ್ನು ಹಿರಿಯುತ್ತಾ "ಥೂ ನೀಚಾ, ಸುಳ್ಳನ್ನು ಹೇಳುವಿಯಾ ? " ಎಂದು ಆರ್ಭಟಿಸುತ್ತಾನೆ.

ಚಾಕರನ ಪಾತ್ರಧಾರಿ ಅಡಿಗೆಯವನು, "ನಾಯಾಕೆ ಸುಳ್ಳುಹೇಳ್ಲಿ, ಮಾಲಕರು ಹೇಳ್ಯಾರ, ಅವ್ರ್ನೇ ಬೇಕಾರೆ ಕೇಳ್ರಿ" ಎಂದು ಹೇಳಿದ.

* * *

## ನನ್ನ ಸಹಾನುಭೂತಿ ಇರಲಿ

"ಅಯ್ಯಾ, ನನ್ನ ಸಹಾನುಭೂತಿ ನಿನಗಿರಲಿ"

"ನಂಗೇನೂ ಆಗಿಲ್ವಲ್ಲೋ ?"

"ಆಗೋದರಲ್ಲಿದೆ. ನಿನ್ನೆ ನನ್ನ ಹೆಂಡ್ತಿ, ನೂರು ರೂಪಾಯಿ ಕೊಟ್ಟು ಒಂದು ಸೀರೆ ತೆಗೆದುಕೊಂಡಳು. ನಿನ್ನ ಹೆಂಡ್ತಿಗೆ ತೋರಿಸೋಕೆ ಈ ಸಂಜೆ ನಿಮ್ಮ ಮನೆಗೆ ಹೋಗುತ್ತಾಳಂತೆ"

* * *

## ಬೇರೆ ಅಕ್ಕಿ ಕೊಡಿ

ಮನೆಯ ಯಜಮಾನ ಸತ್ತು ಹೋದ. ಅವನ ಹಿರಿಯಮಗ ಅಕ್ಕಿ, ಎಳ್ಳನ್ನು ಹೆಣದ ಬಾಯಲ್ಲಿ ಹಾಕಿದ. ಹೆಣವು ಅಕ್ಕಿಯನ್ನೆಲಾ ಉಗುಳಿತು. ಮಗನಿಗೆ ದಾರಿ ತೋರಲಿಲ್ಲ. ರೇಷನ್ ಅಧಿಕಾರಿಯ ಬಳಿ ಹೋಗಿ "ನೀವು ಕೊಟ್ಟಿರುವ ಅಕ್ಕಿಯನ್ನು ಹೆಣ ಉಗುಳುತ್ತದೆ. ಬೇರೆ ಅಕ್ಕಿ ಕೊಡಿ ಸ್ವಾಮಿ" ಎಂದು ಕೇಳಿದ.

............ನಲ್ಲಿ ಸರ್ವೋದಯ ಸಮಾಜವನ್ನು ಸ್ಥಾಪಿಸಲಾಯಿತು. (ದಿನ ಪತ್ರಿಕೆಯಲ್ಲಿ)

—ಸರ್ವೋದಯ ಸ್ವಾಮೀ, ಮುದ್ರಾರಾಕ್ಷಸನ ಹಾವಳಿ ಅಷ್ಟೇ!

*　　　*　　　*

ಡಿಳ್ಳಿಗೆ ಹೋದರೂ ಹಳ್ಳಿಯ ಬುದ್ಧಿ ಬಿಡಲಿಲ್ಲ.

*　　　*　　　*

ಅಧಿಕೋತ್ಪತ್ತಿಯೇ ಇಂದಿನ ಮಂತ್ರ-ಕಾರ್ಮಿಕ ಸಚಿವರಾದ ಜಗಜೀವನರಾಂರವರ ಮುಕ್ತಾಫಲ.

—ಹೌದು, ನಾವು ಸಹ ಇದೇ ಗಾಯತ್ರಿಯನ್ನು ಜಪಿಸುತ್ತಿದ್ದೇವೆ.

*　　　*　　　*

ಬೆಂಗಳೂರಿನ ಜಹಾಂಗೀರ್‌ಷಾ ಸರ್ವರೋಗಗಳಿಗೆ ತೈಲ ಹೆಚ್ಚುತ್ತಾನಂತೆ.

—ನಮಗೆ ಬಂದಿರುವ ಫೈನಾನ್ಶಿಯಲ್ ಫೀವರಿಗೆ ಅವನ ತೈಲದಿಂದ ಗುಣವಾಗುತ್ತದೋ ಹೇಗೆ ಎಂಬುದನ್ನು ನೋಡಬೇಕು.

*　　　*　　　*

ಕಾಂಗ್ರೆಸ್ಸಿನ ಘನತೆ ಇದೀಗ ಹೆಚ್ಚಿದೆ-ನಾಯಕರೊಬ್ಬರ ಭಾಷಣದಲ್ಲಿ.

—೪ ಆಣೆ ಇದ್ದ 'ಶುಲ್ಕ ಒಂದು ರೂಪಾಯಿಗೆ ಏರಿದ್ದರಿಂದಲೇ ಇರಬಹುದು.

*　　　*　　　*

ಅಕಸ್ಮಾತ್ ಹೃದಯಸ್ತಂಭನದಿಂದ ಶ್ರೀ..........ರು ನಿಧನಹೊಂದಿದರು. (ಪತ್ರಿಕೆಯಲ್ಲಿ)

—ಹೃದಯ ಸ್ತಂಭನವಾಗುವುದು ಯಾವಾಗಲೂ ಹಾಗೇ!

## ಕೈಯಿಗೆ ಬಂದ ತುತ್ತು !

ರಾಮಯ್ಯ ಸಾಗರದಲ್ಲಿರುವ ಬೀಗರಮನೆಗೆ ಹೋಗಿದ್ದ. ಬರುವಾಗ ಇರಲೆಂದು ಹತ್ತು ಸೇರು ಅಕ್ಕಿಯನ್ನು ಹಾಸಿಗೆಯಲ್ಲಿ ಹಾಕಿದ್ದ. ಬಸ್ಸಿನಲ್ಲಿ ಶಿವಮೊಗ್ಗಿಗೆ ಬಂದ. ದಾರಿಯಲ್ಲಿ ಇವನನ್ನಾರೂ ಮಾತನಾಡಿಸಲಿಲ್ಲ. ಉಕ್ಕಡಗಳು ಬಂದವು, ಉಕ್ಕಡಗಳು ಹೋದವು ಬೆಂಗಳೂರು ರೈಲಿನಲ್ಲಿ ಕುಳಿತ. ನಿರುಪದ್ರವಿಯಾದ ಇವನ ಹಾಸಿಗೆಯನ್ನು ನೋಡಿ ಪೋಲೀಸಿನವರು ಪೆಚ್ಚು ಮುಖ ಮಾಡಿಕೊಂಡು ಹೋದರು. ಬೆಂಗಳೂರು ಬಂತು. "ಹಾಸಿಗೆ ಬಿಚ್ಚಿ ಸ್ವಾಮಿ ನೋಡೋಣ" ಅಂತ ಇಬ್ಬರು ಸುಂಕದ ಅಧಿಕಾರಿಗಳು ಬಂದು ಹೇಳಿದರು. "ಹಾಸಿಗೆಯಲ್ಲೇನಿದೆ, ಹಳೇ ಬಟ್ಟೆಗಳು, ಬಿಚ್ಚು ಅಂದರೆ ಬಿಚ್ಚುತ್ತೇನೆ" ಅಂತ ರಾಮಯ್ಯ ಧೈರ್ಯವಾಗಿ ಹೇಳಿದ. ಸುಂಕದವರು ಇವನ ದಾರ್ಷ್ಟ್ಯಕ್ಕೆ ಬೆರಗಾಗಿ ಹಾಗೇ ಹೋದರು.

ಜಟಕಾ ಗೊತ್ತು ಮಾಡಿಕೊಂಡು ಬಸವನಗುಡಿಯಲ್ಲಿರುವ ತನ್ನ ಮನೆಗೆ ಬಂದ. ಮನೆಗೆ ಹಾಸಿಗೆ ತೆಗೆದುಕೊಂಡು ಹೋಗುವಾಗ ಇಬ್ಬರು ಬಂದು ತಾಗಿದರು. "ಹಾಸಿಗೆಯಲ್ಲೇನಿದೆ ?" ಎಂದು ಕೇಳಿದರು. ರಾಮಯ್ಯ ಏನೋ ಉತ್ತರಕೊಡಲು ಬಾಯಿಬಿಟ್ಟ. ಅವರಲ್ಲೊಬ್ಬ ಹೇಳಿದ. "ನಾವು ಸಿ. ಐ. ಡಿ. ಖಾತೆಯವರು. ಪೋಲೀಸ್‌ಸ್ಟೇಷನ್ನಿಗೆ ಬನ್ನಿ" ಎಂದು ರಾಮಯ್ಯನನ್ನು ಕರೆದುಕೊಂಡು ಹೋದರು.

ರಾಮಯ್ಯ ಹತ್ತು ಸೇರು ಅಕ್ಕಿಯನ್ನೂ ಕಳೆದುಕೊಂಡ. ಹತ್ತು ರೂಪಾಯಿ ಜುಲ್ಮಾನೆಯನ್ನೂ ತೆತ್ತ.

* * *

ರೂಪಾಯಿ ಸದಸ್ಯತ್ವಕ್ಕೆ ಎ. ಐ. ಸಿ. ಸಿ. ಅಂಗೀಕಾರ ಮುದ್ರೆ ಒತ್ತಿತು.
—ಕಾಂಗ್ರೆಸ್ಸಿಗರೆಲ್ಲ "ಹದಿನಾರಾಣೆ" ಕಾಂಗ್ರೆಸ್ಸಿಗರೇ ಆದ ಹಾಗಾಯಿತು

* * *

## ★ ಅತ್ಯಾಶ್ಚರ್ಯಕರ ವಸ್ತುಗಳು ★

ಅನುಕೂಲಸ್ಥ ಕಾರ್ಯನಿರತ ಪತ್ರಿಕೋದ್ಯೋಗಿ

. . .

ಒಂದೇ ಒಂದು ಸಾರಿ ಮದುವೆಯಾದ ತಾರೆ

. . .

ಮಾತನಾಡದ ಮಂತ್ರಿ,

. . .

ತುಪ್ಪದಿಂದಲೇ ತಿಂಡಿ ತಯಾರಿಸುವ ಹೋಟಲು ಮಾಲೀಕ

. . .

ಅತಿ ಚಿಕ್ಕದಾದ ತಮಿಳು ಚಿತ್ರ

. . .

ಹೆಚ್ಚಿಗೆ ಬಾಡಿಗೆ ಕೇಳದ ಜಟಕಾ ಸಾಬಿ

. . .

ಮಂಗನ ಮುಖ ಮಾಡದ ತಬಲ ಅಥವಾ ಮೃದಂಗವಾದ್ಯಗಾರ

. . .

ಸುಳ್ಳು ಹೇಳದ ವಾರ ಭವಿಷ್ಯ,

## ಸರಿಯಾದ ತರ್ಕ

ಒಬ್ಬರು ಉತ್ತರ ಕರ್ನಾಟಕದ ಮಹನೀಯರು ಮೈಸೂರು ಸೀಮೆಯ ಪ್ರವಾಸ ಕೈಕೊಂಡಿದ್ದರು. ಅವರು ತಮ್ಮ ಪ್ರವಾಸ ಮುಗಿಸಿಕೊಂಡು ಸ್ವಗ್ರಾಮಕ್ಕೆ ಹೋದರು. ತಮ್ಮ ಪ್ರವಾಸಾನುಭವವನ್ನು ವಿವರಿಸಬೇಕೆಂದು ಅಲ್ಲಿಯವರು ಕೇಳಿದಾಗ, "ನೋಡ್ರೆಪಾ, ಅಲ್ಲಿ ಗಂಡಸ್ರೆಲ್ಲಾ ಸ್ವಾಮಿಗಳು, ಹೆಂಗಸ್ರೆಲ್ಲಾ ಅಮ್ಮಗಳು. ಆ ಮಂದಿ ಗಂಡಸ್ರನ್ನ 'ಬನ್ನಿ ಸ್ವಾಮಿ ಹೋಗಿ ಸ್ವಾಮಿ' ಅಂತ ಕರೀತಾರೆ; ಹೆಂಗಸ್ರನ್ನ 'ಬನ್ರೆಮ್ಮಾ, ಹೋಗ್ರಮ್ಮಾ' ಅಂತ ಕರೀತಾರೆ" ಎಂದು ತಮ್ಮ ಅನುಭವವನ್ನು ವ್ಯಕ್ತಪಡಿಸಿದರು.

*　　　　*　　　　*

## ಸಕಾರಣ

"ಏನು ಮುನಿಸ್ವಾಮಪ್ಪ, ನಿನ್ನ ಸಲೂನಿನಲ್ಲಿ ಬರೀ ಬತ್ತಲೆ ಫೋಟೋಗಳನ್ನು ತೂಗುಹಾಕಿದ್ದೀಯಲ್ಲ ?"

"ಹೌದು ಸ್ವಾಮಿ, ಜನರು ಅವನ್ನು ನೋಡಿದ ಕೂಡಲೇ ಅವರಿಗೆ ಕೂದಲು ನಿಮಿರೇಳುತ್ತವೆ. ನಾನು ಸುಲಭವಾಗಿ ಕ್ಷೌರಮಾಡಲು ಅನುಕೂಲವಾಗುತ್ತದೆ."

*　　　　*　　　　*

## ಮಡಿವಂತ

"ಮೊದಲು ಬೀಡಿ ಸೇದುತ್ತಿದ್ದೆ, ಈಗ ಸಿಗರೇಟಿಗೆ ಕೈ ಹಚ್ಚಿದೆಯಲ್ಲ ಕಾರಣವೇನು ?"

"ಬೀಡಿಯನ್ನು ನೂಲಿನಿಂದ ಕಟ್ಟಿರುತ್ತಾರೆ. ಅದು ಮಡಿಗೆ ಬರುವುದಿಲ್ಲಾಂತ ಸಿಗರೇಟ್ ಸೇದುತ್ತಿದ್ದೇನೆ."

# ಕ್ಯೂ ನಿಲ್ಲುವುದು

ರೇಷನ್ ಮತ್ತು ಕಂಟ್ರೋಲುಗಳು ಜಾರಿಯಲ್ಲಿ ಬಂದ ಮೇಲೆ ಅದರೊಂದಿಗೆ ಕ್ಯೂ ನಿಲ್ಲುವ ಪದ್ಧತಿ ಜಾರಿಯಲ್ಲಿ ಬಂದಿತು. ಕ್ಯೂ ನಿಲ್ಲುವುದು ಶಿಸ್ತು ನಿಯಮಕ್ಕೆ ಸಂಬಂಧಪಟ್ಟದ್ದು. ಒಂದೇ ಬಾರಿಗೆ ಗಿರಾಕಿಗಳೆಲ್ಲ ನುಗ್ಗಬಾರದೆಂದು, "ಮೊದಲು ಬಂದವರಿಗೆ ಮೊದಲು ಕೊಡುವುದು" ಎಂಬ ಸುವರ್ಣ ನಿಯಮವನ್ನು ಪಾಲಿಸಬೇಕೆಂದು ಇದನ್ನು ಆಚರಣೆಯಲ್ಲಿ ತಂದಿದ್ದಾರೆ.

ಸರ್ಕಾರ ಎಲ್ಲದರ ಮೇಲೂ ಕರ ಹೇರಿದೆ. ಆದರೆ ಮಾತಿನ ಮೇಲೆ ಇನ್ನೂ ಹೇರಿಲ್ಲ. ಎಲ್ಲ ಪದಾರ್ಥಗಳೂ ಸೇಲ್ಸ್‌ಟ್ಯಾಕ್ಸ್ ಮತ್ತು ಸೂಪರ್ ಟ್ಯಾಕ್ಸ್‌ಗಳ ಕಟಕಟೆಯಲ್ಲಿ ಸಿಕ್ಕಿವೆ. ಸರ್ಕಾರ ಮಾತಿನ ಮೇಲೆ ಕರ ಹೇರಿದ್ದರೆ ಅದಕ್ಕೆ ಕೋಟ್ಯಂತರ ರೂಪಾಯಿ ಲಾಭ ಆಗುತ್ತಿತ್ತೆಂದು ಧಾರಾಳವಾಗಿ ಹೇಳಬಹುದು. ಯಾವ ನಾಯಕನೇ ಆಗಲಿ (ನಾಯಕನಲ್ಲವಾದರೆ ಹೋಗಲಿ) ಶಿಸ್ತು, ಸಂಯಮ ಎಂಬ ಪದ ಪ್ರಯೋಗಗಳಿಂದ ತನ್ನ ಭಾಷಣ ಆರಂಭಿಸಿ ಆ ಮಾತುಗಳಿಂದಲೇ ತನ್ನ ಭಾಷಣ ಮುಕ್ತಾಯಗೊಳಿಸುತ್ತಾನೆ. ಪದಾರ್ಥಗಳನ್ನು ರೇಷನ್ ಮಾಡಿರುವುದರಿಂದ ನಾವು ಬೇಡವೆಂದರೂ ಸಂಯಮಕ್ಕೆ ಬೇಕಾದಷ್ಟು ಅವಕಾಶವಿದೆ. ನಮ್ಮಲ್ಲಿ ಮನೆಮಾಡಿದ್ದ ಜಿಹ್ವಾಚಾಪಲ್ಯ ಅಡಗಿಹೋಗಿ ಅದೆಷ್ಟೋ ಕಾಲವಾಯಿತು. "Man is a rational being" "ರೇಷನ್ ಪದಾರ್ಥಗಳನ್ನು ತಿಂದು ಜೀವಿಸುವ ಪ್ರಾಣಿಯೇ ಮನುಷ್ಯ" ಎಂಬ ಸಿದ್ಧಾಂತವನ್ನು ಸಾರ್ಥಕಪಡಿಸಿಕೊಂಡಿದ್ದೇವೆ. ಇದು ಎಲ್ಲರ ಅನುಭವಕ್ಕೆ ಬಂದಿರುವ ಮಾತು. ಕ್ಯೂ ನಿಲ್ಲುವುದು ಶಿಸ್ತಿಗೆ ಸಂಬಂಧಪಟ್ಟ ವಿಷಯವಾಗಿದೆ.

ಶಿಸ್ತನ್ನು ಪಾಲಿಸುವುದು ಸಮಾಜಕ್ಕೆ ಹಿತ ಆಗುವಂತೆ, ಸಂಬಂಧಪಟ್ಟ ವ್ಯಕ್ತಿಗೂ ಹಿತ ಆಗುತ್ತದೆ. ಈಗ ಎರಡು ವರ್ಷಗಳ ಹಿಂದೆ ದೇಶದಲ್ಲಿ ಬಟ್ಟೆಯ ಕ್ಷಾಮ ವಿಪರೀತವಾಗಿತ್ತು. ದೀಪಾವಳಿಯ ಹಬ್ಬಕ್ಕೆ ಪಂಚೆ

ಜೊತೆ ಕೊಡುತ್ತಾರೆಂಬ ಕಮರು ವಾಸನೆ ನನ್ನ ಮೂಗಿಗೆ ತಾಗಿತು. ಅಂಗಡಿಯ ಮುಂದೆ ಜಾತ್ರೆ ನಡೆದಿದ್ದಿತು. ನಾನೂ ಒಬ್ಬ ಗುಂಪಿನಲ್ಲಿ ಗೋವಿಂದನಾದೆ. ಗಲಾಟೆಯಲ್ಲಿ ಗಲಾಟೆ, ಒಂದು ಜೊತೆ ಪಂಚೆಯನ್ನು ಹೊಡೆದುಕೊಂಡು ಹೋಗೋಣವೆಂದು ನುಗ್ಗಿದೆ. "ಹೋ" ಎಂದು ಜನ ಸಂದಣಿ ಕೂಗಿತು. ದೊಡ್ಡ ದಂಗೆಯೇ ಆಯಿತು. ನನಗೆ ಪಂಚೆ ಜೊತೆ ಸಿಕ್ಕುವುದಿರಲಿ, ನಾನು ಉಟ್ಟಿದ್ದ ಪಂಚೆಯನ್ನೇ ಯಾರೋ ಹಾರಿಸಿದರು. ನಿಜಕ್ಕೂ ಇದು ಮಾನ ಹೋಗುವ ಪ್ರಸಂಗ. ನನ್ನ ಹೆಗಲಿನಮೇಲೊಂದು ಉತ್ತರೀಯ ಇಲ್ಲದಿದ್ದರೆ ಏನಾಗುತ್ತಿತ್ತೋ ಏನೋ ?

ರೇಷನ್ ಪದಾರ್ಥಗಳನ್ನು ಮಾರುವ ಅಂಗಡಿಯೊಂದು ನಮ್ಮ ಬೀದಿಯಲ್ಲಿದೆ. ಆ ಅಂಗಡಿಯ ಮೇಲೆ ತೂಗು ಹಾಕಿರುವ ಬೋರ್ಡಿನ ಮೇಲೆ ಈ ರೀತಿ ಬರೆದಿದ್ದಾರೆ—"**ಧ್ಯಾನದ ಡಿಪೋ**". ಧಾನ್ಯದ ಡಿಪೋ ಎಂಬುದು ಬೋರ್ಡ್ ಬರಹಗಾರನ ಕೈಗೆ ಸಿಕ್ಕಿ ಧ್ಯಾನದ ಡಿಪೋ ಆಗಿದೆ. ಆದರೂ ಇದರಿಂದ ಯಾವ ಪ್ರಮಾದವೂ ಆಗಿಲ್ಲ. ಮತ್ತು ಬರೆದಿರುವ ವಿಷಯ ಸತ್ಯ ದೂರವಾಗಿಲ್ಲ. ಇಂದಿನ ನಮ್ಮ ಜೀವನದಲ್ಲಿ ಏನು ಸಿಕ್ಕರೂ ಸಿಕ್ಕುತ್ತದೆ, ಸಮಯ ಮಾತ್ರ ಸಿಗುವುದಿಲ್ಲ. ಯಾರನ್ನು ಕೇಳಿದರೂ ಪುರುಸೊತ್ತಿಲ್ಲ ಎಂದು ಹೇಳುತ್ತಿರುತ್ತಾರೆ. ಎಲ್ಲರೂ ದುರ್ದಾನ ಹಿಡಿದ ಬ್ರಾಹ್ಮಣರಂತೆ ಓಡುತ್ತಿರುತ್ತಾರೆ-ಗೊತ್ತು ಗುರಿ ಇಲ್ಲದೆ. ಎಲ್ಲವೂ ಚುಟಿಕೆ ಚಪ್ಪರದಲ್ಲಿ ಆಗಬೇಕು. ಪತ್ರಿಕೆಗಳ ತಲೆಬರಹಗಳನ್ನು ಓದಿ ಸುದ್ದಿಯ ತಿರುಳು ಸವಿಯುತ್ತಾರೆ. ಪುಸ್ತಕ ವಿಮರ್ಶೆಗಳನ್ನೋದಿ ಪುಸ್ತಕ ಓದಿದ ಆನಂದ ಅನುಭವಿಸುತ್ತಾರೆ. ಮತ್ತೆ ಕೆಲವರು ವಿಮರ್ಶೆ ಓದಿ, ಪುಸ್ತಕ ಓದಿದೆವೆಂಬ ದಾಷ್ಟೀಕ ಪ್ರದರ್ಶಿಸುತ್ತಾರೆ. ಹೆಬ್ಬೊತ್ತಿಗೆಗಳನ್ನು ಕೈಕೋಲಿನಿಂದ ಸಹ ಮುಟ್ಟುವ ಪಾಪಕ್ಕೆ ಹೋಗುವುದಿಲ್ಲ. ಇವಕ್ಕೆಲ್ಲ ಕಾರಣ ಒಂದೇ-ಬಿಡುವಿಲ್ಲ.

ಅದರಂತೆ ಈಗಿನ ಕಾಲದಲ್ಲಿ ಆಸ್ತಿಕತೆ ಅಳಿಯುತ್ತಿರುವುದಕ್ಕೆ ಜನಗಳಿಗೆ ಧ್ಯಾನಕ್ಕೆ ಪುರಸೊತ್ತು ಸಿಗದಿರುವುದೇ ಕಾರಣವಾಗಿದೆ. ಸಿಗದಿರುವ ರೇಷನ್ ಪದಾರ್ಥಕ್ಕಾಗಿ ಕ್ಯೂನ ಕೊನೆಯಲ್ಲಿ ನಾವು ಕೂತರೆ, ಸುಖವಾಗಿ ಧ್ಯಾನಿಸ

ಬಹುದು. ಋಷಿ ಪುಂಗವ ವಿಶ್ವಾಮಿತ್ರನು ಒಂದು ಕಾಲಿನಲ್ಲಿ ನಿಂತು ತಪಸ್ಸು ಮಾಡಿ ದೇವರನ್ನು ಒಲಿಸಿಕೊಂಡನಂತೆ. 'ಕ್ಯೂ ನಿಂತಾಗ ಎರಡೂ ಕಾಲುಗಳ ಮೇಲೆ ನಿಂತವರು ಬದಲಾವಣೆಗೆಂದು ಒಂದು ಕಾಲಿನ ಮೇಲೆ ನಿಂತರೆ ಡಿಪ್ಪೋ ಅಧಿಕಾರಿಯು ಒಲಿಯದಿದ್ದರೆ ಹೋಗಲಿ, ದೇವರಾದರೂ ಒಲಿಯುತ್ತಾನೆ, ರೇಷನ್ ಪದಾರ್ಥಗಳ ಬದಲು ವರಗಳಾದರೂ ಸಿಕ್ಕುತ್ತವೆ.

ನನ್ನ ಕೊನೆಯ ಮಗ ಯಾವ ತರಗತಿಯಲ್ಲೇ ಆಗಲಿ ಮೂರು ಅಥವಾ ನಾಲ್ಕು ವರ್ಷಗಳ ಕಾಲ ವಿಶ್ರಮಿಸಿಕೊಳ್ಳದೆ ಮುಂದೆ ಹೋದವನಲ್ಲ. ಅವನು ಈ ಬಾರಿ ಪಾಸ್ ಆಗುವದಿರಲಿ, ಇಡೀ ಸಂಸ್ಥಾನಕ್ಕೆ ಮೊದಲನೆಯವನಾಗಿ ಪಾಸ್ ಆಗಿದ್ದಾನೆ. ನಿಮಗೆ ಆಶ್ಚರ್ಯವಾಗುವುದಿರಲಿ, ನನಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಅವನು ಆ ರೀತಿ ಪಾಸ್ ಆದ ರಹಸ್ಯವನ್ನು ಅವನಿಂದಲೇ ತಿಳಿದುಕೊಂಡೆ. "ಅಪ್ಪಾ ಏನೂ ಇಲ್ಲ, ಪ್ರತಿದಿನ ರೇಷನ್ ಸಾಮಾನುಗಳಿಗೆ ಹೋಗುತ್ತಿದ್ದೆನಲ್ಲ, ಅಲ್ಲೇ ಪಾಠಗಳನ್ನು ಓದಿಕೊಳ್ಳುತ್ತಿದ್ದೆ. ತುಂಬಾ ಪುರಸೊತ್ತು ಸಿಗುತ್ತಿತ್ತು. ಅದಕ್ಕೇ ಹಾಗೆ ಪಾಸಾದೆ" ಅಂತ ಹೇಳಿದ.

ಮನುಷ್ಯನಿಗೆ ತಾಳ್ಮೆ, ಸಹನೆ ಮುಂತಾದ ಅತ್ಯುಚ್ಚ ಗುಣಗಳು ಕ್ಯೂ ನಿಲ್ಲುವುದರಿಂದ ಬರುತ್ತವೆ. ನಾವು ಬಹಳ ಆತುರವಾಗಿರಬಹುದು, ತಲೆಹೋಗುವಂಥ ಕೆಲಸವಿರಬಹುದು. ನಮ್ಮ ಸರದಿ ಬರುವವರೆಗೂ ಕಾಯಲೇ ಬೇಕು. ನಾವು ಕೋಪಗೊಂಡರೆ ಅದನ್ನು ಯಾರೂ ಕಿವಿಯ ಮೇಲೆ ಹಾಕಿಕೊಳ್ಳುವುದಿಲ್ಲ. ಸಿಟ್ಟು ಕೆಟ್ಟದ್ದು, ಅದನ್ನು ಮೆಟ್ಟಿಹಾಕಬೇಕೆಂದು ವೇದಪುರಾಣಗಳು ಶಂಖನಾದ ಮಾಡುತ್ತಿವೆ. ಕ್ಯೂನಲ್ಲಿ ನಿಲ್ಲುವವನು ತನ್ನ ಸಿಟ್ಟನ್ನು ಯೋಗಿಯಂತೆ ಮೆಟ್ಟಲು ಕಲಿಯುತ್ತಾನೆ.

ಸಮಾಜವಾದಕ್ಕೆ ಈಗ ಎಲ್ಲೆಲ್ಲೂ ಪುರಸ್ಕಾರ. ಅಟ್ಲಿ ಸರ್ಕಾರ, ನೆಹರೂ ಸರ್ಕಾರ ಎಲ್ಲಾ ಸಮಾಜವಾದಿಗಳೇ. ರಷ್ಯಾವು ಸಮಾಜವಾದದಿಂದ ಹಲವಾರು ಗಾವುದ ಮುಂದೆ ಹೋಗಿದೆ. ಕ್ಯೂ ನಿಲ್ಲುವುದರಲ್ಲಿ ಎಲ್ಲರೂ ಒಂದೇ. ವ್ಯಕ್ತಿ ವ್ಯಕ್ತಿಗೆ ಭೇದವಿಲ್ಲ. ಬಡವ ಬಲ್ಲಿದ, ಉತ್ತಮ ಹೀನ ಕುಲದವ, ಅಧಿಕಾರಿ ಕೆಲಸಗಾರ, ಎಲ್ಲರೂ ಒಂದೇ. ಸಮಾಜವಾದದ ವಿರೋಧಿಗಳನ್ನು

ಒಂದು ತಿಂಗಳು ಕಾಲ ಸತತವಾಗಿ ಕ್ಯೂನಲ್ಲಿ ನಿಲ್ಲುವಂತೆ ಮಾಡಿದರೆ ಅವರಲ್ಲಿ ಮನೆಮಾಡಿರುವ ಉಚ್ಚ ಹಾಗೂ ನೈಚ್ಯಾನುಸಂಧಾನಗಳು ಕಣ್ಮರೆಯಾಗುವುದರಲ್ಲಿ ಸಂದೇಹವಿಲ್ಲ.

ಜಾತೀಯತೆಯ ಹಾವಳಿ ಎಲ್ಲ ಕ್ಷೇತ್ರಗಳಲ್ಲಿಯೂ ಆಗಿದೆ. ಆದರೆ ಅದು ಕ್ಯೂನಲ್ಲಿ ಪ್ರವೇಶಿಸುವ ಸಾಹಸ ಮಾಡಿಲ್ಲ. ಒಂದು ವೇಳೆ ಅದು ನುಗ್ಗಿದರೆ ಅದರ ಬೇಳೆ ಬೇಯಲಾರದು.

ಪಂಡಿತ ನೆಹರೂ ಮೊದಲುಗೊಂಡು ಎಲ್ಲ ನಾಯಕರೂ, ಪ್ರಜಾಮಂತ್ರಿಗಳಿಗೆ ಮತ್ತು ಸರ್ಕಾರಿ ಉನ್ನತಾಧಿಕಾರಿಗಳಿಗೆ ಬುದ್ಧಿ ಹೇಳುತ್ತ ಬಂದಿದ್ದಾರೆ. ಏನೆಂದರೆ ಜನಸಾಮಾನ್ಯರೊಂದಿಗೆ (Common Man) ನಿಕಟ ಸಂಬಂಧ ಸಂಪರ್ಕಗಳನ್ನು ಇಟ್ಟುಕೊಳ್ಳಬೇಕೆಂದೂ ಅವರ ಕಷ್ಟ ನಿಷ್ಠೂರಗಳನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕೆಂದೂ ತಿಳಿಸುತ್ತ ಬಂದಿದ್ದಾರೆ. ಇದಕ್ಕೆ **Mass Contact** ಅಂತ ಇಂಗ್ಲೀಷಿನಲ್ಲಿ ಹೇಳುತ್ತಾರೆ. ಈ **Mass Contact** ಆಗಲು ಎರಡು ಸರಿಯಾದ ಸಾಧನಗಳಿವೆ. ಒಂದು ರೈಲಿನ ಮೂರನೆ ತರಗತಿಯಲ್ಲಿ ಪ್ರಯಾಣ ಮಾಡುವುದು. ಇನ್ನೊಂದು ಕ್ಯೂನಲ್ಲಿ ನಿಲ್ಲುವುದು. ಕ್ಯೂನಲ್ಲಿ ನಿಂತಾಗ ಪ್ರತಿಯೊಬ್ಬನೂ ತನ್ನ ಅಳಲನ್ನು ತೋಡಿಕೊಳ್ಳುತ್ತಿರುತ್ತಾನೆ, ಇನ್ನೊಬ್ಬ ತೊಂದರೆ ತಾಪತ್ರಯಗಳನ್ನು ಕೇಳಿ ಮರುಕಗೊಳ್ಳುತ್ತಾನೆ. ನಾನಾ ಸ್ವಭಾವದ ಜನರು, ನಾನಾ ರೀತಿ ನೀತಿಗಳನ್ನುಳ್ಳವರು, ನಾನಾ ಅಂತಸ್ತಿನಲ್ಲಿರುವವರು, ಮುಂತಾದವರನ್ನೆಲ್ಲ ಕಾಣಲು, ಅವರನ್ನು ಅರಿತುಕೊಳ್ಳಲು ಕ್ಯೂಗಿಂತ ಉತ್ತಮ ಸಾಧನ ಬೇರೊಂದಿಲ್ಲ. ನಮ್ಮ ಮಂತ್ರಿಗಳೆಲ್ಲ ತಿಂಗಳಿಗೆ ಇಂತಿಷ್ಟು ದಿನದಂತೆ ಕ್ಯೂನಲ್ಲಿ ನಿಂತರೆ ಜನಸಾಮಾನ್ಯರನ್ನು ಅರ್ಥಮಾಡಿಕೊಳ್ಳುವುದು ಅವರಿಗೆ ಬಹಳ ಸುಲಭವಾಗುತ್ತದೆ.

ಇಲ್ಲಿ ಕೊಂಚ ವಿಷಯಾಂತರವಾಗಬೇಕಾದ್ದರಿಂದ ವಾಚಕರ ಕ್ಷಮೆ ಬೇಡುತ್ತೇನೆ. ಎಲ್ಲರೂ ಜನಸಾಮಾನ್ಯರ (ಸಾಮಾನ್ಯ ಜನರ) ವಿಚಾರವಾಗಿ ಮಾತನಾಡುವವರೇ ಆಗಿದ್ದಾರೆ. ಆದರೆ 'ನಾನು ಜನಸಾಮಾನ್ಯ'

ಎಂದು ಎದೆಯ ಮೇಲೆ ಕೈಯಿಟ್ಟು ಹೇಳಿದವನನ್ನು ನಾನು ನೋಡಿಲ್ಲ. ನಿಜಕ್ಕೂ ಆ ವಿಚಿತ್ರ ಪ್ರಾಣಿಯನ್ನು ನಾನು ಇದುವರೆಗೂ ಕಂಡಿಲ್ಲ. ಯಾರು ಮಾತನಾಡಲಿ, ಲೇಖನ ಬರೆಯಲಿ, ಪತ್ರಿಕೆಯವರು ವರದಿ ಮಾಡುವಂತೆ 'ವಿಚಾರ ಪರಿಪ್ಲುತವಾಗಿ' ಭಾಷಣ ಮಾಡಲಿ 'ಜನ ಸಾಮಾನ್ಯರ ಉದ್ಧಾರ' ಎಂಬ ಉದ್ಗಾರ ತೆಗೆಯುತ್ತಾರೆ. ಆ 'ಜನಸಾಮಾನ್ಯ' ನನ್ನು ತೋರಿಸಿ ಕೊಟ್ಟವರಿಗೆ ನೂರು ರೂಪಾಯಿ ಬಹುಮಾನ ಕೊಡುವದಾಗಿ ನಾನು ಪತ್ರಿಕೆ ಗಳಲ್ಲಿ ಜಾಹಿರಾತು ಕೊಟ್ಟಿದ್ದೆ. ಆ ಬಹುಮಾನ ಪಡೆಯಲು ಇದುವರೆಗೂ ಯಾರೂ ಮುಂದೆ ಬಾರದಿರುವುದು ಸೋಜಿಗದ ಸಂಗತಿಯಾಗಿದೆ.

ಯುದ್ಧಕ್ಕೆ ಮುಂಚೆ ಕ್ಯೂ ವಿಚಾರ ನಮಗೆ ತಿಳಿದಿರಲಿಲ್ಲ. ಕ್ಯೂ ಇಲ್ಲದ ನಮ್ಮ ಜೀವನ ಹೋಟಲಿನ ಹಾಲಿನಂತೆ ನೀರಸವಾಗಿತ್ತು. ಸಮಾಜಜೀವಿ ಯೆಂದು ಹೇಳಿಕೊಳ್ಳುವ ಮನುಷ್ಯ ಸಮಾಜವನ್ನು ವಿವಿಧ ದೃಕ್ಕೋಣಗಳಿಂದ ನೋಡುವುದನ್ನು ಅಲ್ಲಗಳೆದಿದ್ದ. ತಾನಾಯಿತು ತನ್ನ ಮಟ್ಟಿನ ಜಗತ್ತಾ ಯಿತು, ಅನ್ನುವ ಸಂಕುಚಿತ ದೃಷ್ಟಿಯುಳ್ಳವನಾಗಿದ್ದ. ಈಗ ಅವನ ಬುದ್ಧಿ, ಮನಸ್ಸು ವಿಕಾಸ ಹೊಂದಿದೆ ಶಬ್ದಸಂಪತ್ತಿ, ಜ್ಞಾನಸಂಪತ್ತಿ ಹೆಚ್ಚಿದೆ. ಅರ್ಜಂಟೈನಾದಲ್ಲಿ ಈ ವರ್ಷ ಗೋಧಿಯ ಬೆಳೆ ಎಷ್ಟೆಂಬುದನ್ನು ನೀರು ಕುಡಿ ದಂತೆ ಹೇಳುತ್ತಾನೆ. ಅಮೆರಿಕದಿಂದ ಬರುವ ಚಚ್ಚೌಕ ಆಲೂಗಡ್ಡೆ ಚೂರು ಗಳನ್ನು ಯಾವ ರೀತಿಯಲ್ಲಿ ಅಡಿಗೆಯಲ್ಲಿ ಬಳಸಿದ್ದರೆ ರುಚಿಕಟ್ಟಾಗಿರುತ್ತದೆಂ ಬುದನ್ನು ಹೇಳುತ್ತಾನೆ. ಬರ್ಮಾ, ಮಲಯಾ, ಸಯಾಂ ಮುಂತಾದ ಕಡೆಗಳಿಂದ ನಮಗೆ ಅಕ್ಕಿ ಬಾರದಿರಲು ಕಾರಣವೇನೆಂಬುದನ್ನು ವಿಶದವಾಗಿ ತಿಳಿಸುತ್ತಾನೆ. ರೇಷನ್ ಮತ್ತು ಕ್ಯೂ ಪದ್ಧತಿ ಇಲ್ಲದಿದ್ದರೆ ಅವನ ಪ್ರಗತಿಯ ಓಟವು ಮಂದಗಮನದಲ್ಲಿ ಸಾಗುತ್ತಿತ್ತೆಂದು ಹೇಳಬಹುದು.

ಬರೀ ರೇಷನ್ ಅಂಗಡಿಗಳ ಮುಂದೆ ಕ್ಯೂ ನಿಲ್ಲುವುದು ಎಂದು ತಿಳಿಯ ಬೇಡಿ. ಸಿನಿಮಾಕ್ಕೆ ಟಿಕೆಟ್ ತೆಗೆದುಕೊಳ್ಳುವುದಕ್ಕೆ ಕ್ಯೂ, ಅನಂತರ ಒಳಗೆ ಹೋಗುವುದಕ್ಕೆ ಕ್ಯೂ, ಬಸ್ ಹತ್ತುವಾಗ ಕ್ಯೂ, ರೈಲಿನ ವಿಚಾರವೂ ಹೀಗೇ. ಸರ್ಕಾರಿ ಆಫೀಸ್‌ಗಳಲ್ಲಿ ಅರ್ಜಿಗಳನ್ನು ಹಿಡಿದುಕೊಂಡು ಉಮೇದುವಾರರು

ಕ್ಯೂ ನಿಂತಿರುತ್ತಾರೆ. ಬಾಡಿಗೆ ಮನೆಗಳನ್ನು ಕೊಡಿಸಿಕೊಡಬೇಕೆಂದು ಹೌಸ್ ಕಂಟ್ರೋಲರ ಕಛೇರಿಯ ಮುಂದೆ ಕ್ಯೂ, ಯಾವುದಾದರೂ ಒಳ್ಳೆಯ ವರ ಇದೆಯೆಂದರೆ ವರನ ಮನೆಯ ಮುಂದೆ ಕನ್ಯಾಪಿತೃಗಳ ಕ್ಯೂ. ಹೀಗೆ ಕ್ಯೂ ನಮ್ಮ ಜೀವನದ ಎಲ್ಲ ಭಾಗಗಳನ್ನೂ ಆಕ್ರಮಿಸಿದೆ.

ಹುಡುಗಿಯರಿಗೆ ಮದುವೆಯ ವಯಸ್ಸಾಗಿದ್ದರೂ ಮದುವೆ ಮಾಡಲು ವರಗಳೇ ಸಿಕ್ಕುವುದಿಲ್ಲ. ಮದುವೆಯನ್ನು ಮಾಡಿಕೊಂಡ ವರಗಳು ಮನೆ ಮಾಡಿಕೊಂಡು ಸಂಸಾರಸ್ಥರಾಗುವ ಹಾಗಿಲ್ಲ. ಏಕೆಂದರೆ ಬಾಡಿಗೆ ಮನೆಗಳು ಸಿಕ್ಕುವುದಿಲ್ಲ. ಕನ್ಯಾಪಿತೃಗಳು ವರನ ಬೇಟೆಯ ಜೊತೆಗೆ ಬಾಡಿಗೆ ಮನೆ ಬೇಟೆಯನ್ನೂ ಸಹ ಮಾಡಬೇಕಾಗುತ್ತದೆ. ವರನ ಪ್ರಶ್ನೆಯೇ ಇದು. "ನೀವೇನೋ ನಿಮ್ಮ ಮಗಳನ್ನು ಧಾರೆ ಎರೆದು ಕೊಡುತ್ತೀರಿ! ಆದರೆ ಹುಡುಗಿಯನ್ನೇನು ಜೇಬಿನಲ್ಲಿ ಹಾಕಿಕೊಂಡು ತಿರುಗಾಡಲೆ? ಹಾಗೇ ಒಂದು ಬಾಡಿಗೆ ಮನೆಯನ್ನು ಕೊಡಿಸಿಬಿಡಿ" ಎಂದು ಹೇಳುತ್ತಾನೆ. ವರನ ಬೇಟೆಯಾಡುವುದರಲ್ಲಿಯೇ ಸುಸ್ತಾದ ಮಾವ ಇನ್ನು ಮನೆ ಬೇಟೆಗೆ ಹೇಗೆ ಹೊರಟಾನು ?

ವರಗಳು ಬೇಕಾದ ಕನ್ಯೆಯರ ತಂದೆಗಳು ಕ್ಯೂ ನಿಲ್ಲಬೇಕು. ಮದುವೆ ಆಗದೆ ಹಟ ಹಿಡಿದಿರುವ ವರಗಳನ್ನು ಲೆಕ್ಕ ಹಾಕಿ, ರೇಷನ್ ಅಧಿಕಾರಿಯು "ಮೊದಲು ಬಂದವರಿಗೆ ಮೊದಲು" ಎಂಬ ಸುವರ್ಣ ನಿಯಮದಂತೆ ಒಂದೊಂದು ವರವನ್ನು ಹಂಚಬೇಕು. ಮತ್ತು ಈ ನೂತನ ದಂಪತಿಗಳಿಗೆ ಅವರ ನಂಬರಿನ ರೀತ್ಯಾ ಬಾಡಿಗೆ ಮನೆಯನ್ನು ಕೊಡಬೇಕು.

ಇಷ್ಟೆಲ್ಲ ಕ್ಯೂ ಪುರಾಣ ಬರೆಯಲು ನನಗೆ ವೇಳೆ ಎಲ್ಲಿ ಸಿಕ್ಕಿತು, ಎಂದು ನೀವು ಕೇಳಬಹುದು. ಕ್ಯೂನಲ್ಲಿ ನಿಂತಾಗಲೇ ಈ ಲೇಖನ ಬರೆದಿದ್ದೇನೆ, ಎಂದು ಹೇಳಿದರೆ ನೀವು ನಂಬುವುದಿಲ್ಲವೆಂದು ನನಗೆ ಗೊತ್ತು.



ಅಮೆರಿಕದ ಸೈನ್ಯಬಲವನ್ನು ಹೆಚ್ಚಿಸಲು ಅಲ್ಲಿರುವ ಎಂಟು ಲಕ್ಷ ಅವಿವಾಹಿತರಾದ ಹದಿನೆಂಟು ವರ್ಷದ ಯುವಕರನ್ನು ಸೈನ್ಯಕ್ಕೆ ಕೂಡಲೇ ಸೇರಿಸಿಕೊಳ್ಳಬೇಕೆಂದು ಜಾರ್ಜ್ ಮಾರ್ಷಲ್‌ರವರು ಅಮೆರಿಕನ್ ಸರ್ಕಾರಕ್ಕೆ ಸೂಚನೆ ಇತ್ತಿದ್ದಾರೆ.

—ಮದುವೆಯಾದರೆ ಹೆಂಡಿರ ಕಾಟ; ಆಗದಿದ್ದರೆ ಸರ್ಕಾರದ ಕಾಟ. ಅತ್ತ ದರಿ ಇತ್ತ ಪುಲಿ ಅಂದ ಹಾಗೆ.

* * *

ಮದ್ರಾಸಿನಲ್ಲಿ ಕುದುರೆ ಜೂಜಿಗೆ ಮತ್ತೊಂದು ವರ್ಷ ಜೀವದಾನ ಕೊಡುವ ಆಲೋಚನೆ ಸರ್ಕಾರಕ್ಕಿದೆಯೆಂದೂ, ಮದ್ರಾಸ್ ಟರ್ಫ್‌ಕ್ಲಬ್‌ನವರು ಈ ಬಗ್ಗೆ ಸರ್ಕಾರದಲ್ಲಿ ನಿಯೋಗ ಹೋಗಲಿದ್ದಾರೆಂದೂ ವರದಿಯಾಗಿದೆ.

—ಕುದುರೆ ಜೂಜಿಗೆ ಮತ್ತೊಂದು ವರ್ಷ ಜೀವದಾನ ಸಿಕ್ಕುತ್ತದೆಯೋ ಇಲ್ಲವೋ ಎನ್ನುವುದರ ಮೇಲೆ ಬೆಟ್ಟಿಂಗ್ ನಡೆಯುತ್ತಾ ಇದೆಯಂತೆ.

* * *

ಮಂತ್ರಿ ಪದವಿ ಹೂವಿನ ಸುಪ್ಪತ್ತಿಗೆಯಲ್ಲ—ಶ್ರೀ ರಾಜಾಜಿ.

—ಆದರೂ ಅನೇಕರಿಗೆ ಆ ಮುಳ್ಳಿನ ಮೇಲೇ ಹೊರಳಾಡಬೇಕೆಂಬ ಬಯಕೆಯಿದೆಯಲ್ಲ. ಏನುಮಾಡಬೇಕು ?

* * *

೧೯೪೩ರಿಂದ ಜಾರಿಯಲ್ಲಿದ್ದ ಬೆಣ್ಣೆ ಮೇಲಿದ್ದ ರಫ್ತಿನ ನಿಷೇಧವನ್ನು ಸರ್ಕಾರ ರದ್ದುಗೊಳಿಸಿದೆ.

—ಬೆಣ್ಣೆ ಹಚ್ಚುವ ಕಾರ್ಯಕ್ರಮಗಳೆಲ್ಲ ಮುಗಿದಂತಾಯಿತೇನೋ ?

* * *

ಕಾಲಿಗೆ ದೂರವಾದರೆ ಕಾರಿಗೆ ದೂರವೇ !

* * *

ರಾಷ್ಟ್ರಗೀತೆಯನ್ನು ಸಾಮೂಹಿಕವಾಗಿ ಹಾಡಬೇಕು-ಪ್ರಧಾನಿ ನೆಹರೂ.

—ಸಭೆಗೆ ಇಷ್ಟೇ ಜನ ಬಂದಿದ್ದರು ಎಂಬುದನ್ನು ಬಹುಸುಲಭವಾಗಿ ಲೆಕ್ಕಹಾಕಬಹುದು.

* * *

ಉತ್ತರ ಕೊರಿಯನ್ನರಿಗೆ ತಿಳಿಯಬಾರದೆಂದು ಬ್ರಿಟಿಷ್ ಸೈನಿಕರು ಉರ್ದುವಿನಲ್ಲೇ ಮಾತನಾಡುತ್ತಾರಂತೆ.

—ಜಟಕಾದವರೂ ನಮ್ಮನ್ನು ಮೋಸಮಾಡಲು ಉರ್ದುವಿನಲ್ಲೇ ಮಾತನಾಡುತ್ತಿರುತ್ತಾರೆ.

* * *

ಸೈನಿಕರಿಗಿಂತ ಶಿಕ್ಷಕನೇ ಹೆಚ್ಚು-ಆಚಾರ್ಯ ಕೃಪಲಾನಿ.

—ಹೌದು, ಸೈನಿಕನು ಶತ್ರುವಿನೊಂದಿಗೆ ಹೋರಾಡುತ್ತಾನೆ, ಶಿಕ್ಷಕನು ಹಸಿವಿನೊಂದಿಗೆ ಹೋರಾಡುತ್ತಾನೆ.

* * *

ದೆಹಲಿಯಲ್ಲಿ ಕಣ್ಣು ಕಾಣದಷ್ಟು ದಟ್ಟವಾಗಿ ವಿಪರೀತ ಮಂಜು ಬೀಳುತ್ತಲಿದೆಯಂತೆ.

—ಸರ್ಕಾರದ ಅನಿಶ್ಚಿತ ಧೋರಣೆಗಳು ಈ ಕಾರಣದಿಂದಲೇ ಇರಬಹುದೆಂದು ಊಹಿಸಲಾಗಿದೆ.

* * *

ಲಂಡನ್ನಿನಲ್ಲಿ ಹತ್ತು ರಾಷ್ಟ್ರಗಳ ರಬ್ಬರ್ ಸಮ್ಮೇಳನ ಸೇರಲಿದೆಯಂತೆ.

—ಚರ್ಚೆಗಳು ವಿಪರೀತವಾಗಿ ಎಳೆದಾಡಲ್ಪಡುವವೆಂದು ಸುಲಭವಾಗಿ ಊಹಿಸಬಹುದಾಗಿದೆ.

* * *

# ನಾಡಿಗೇರರ
# ಮರಣ ಶಾಸನ

ಈ ಮರಣ ಶಾಸನವನ್ನು ಬರೆಯುವಾಗ ನಾನು ಯಾವ ಮಾದಕ ಪದಾರ್ಥವನ್ನೂ ಸೇವಿಸಿರಲಿಲ್ಲವೆಂದು ಆತ್ಮಸಾಕ್ಷಿಯಾಗಿ ಹೇಳುತ್ತೇನೆ. ಮತ್ತು ಇದನ್ನು ಬರೆಯುವಾಗ ನನಗೆ ಯಾವ ತರಹೆ ಪಿತ್ತ ವಿಕಾರಾದಿಗಳೂ, ಅಜೀರ್ಣದಿಂದ ತಲೆದೋರಬಹುದಾದ ಉಪದ್ವ್ಯಾಪಗಳೂ ಆಗಿರಲಿಲ್ಲ ವೆಂದು ಧೈರ್ಯವಾಗಿ ಹೇಳುತ್ತೇನೆ. ಅಲ್ಲದೆ ಇದನ್ನು ಬರೆಯುವಾಗ ಯಾರ ಒತ್ತಾಯ ಒತ್ತಾಸೆಗಳಿಗೂ ನಾನು ಸಿಕ್ಕಿರಲಿಲ್ಲವೆಂದೂ ಮನಸ್ಸಾಕ್ಷಿಯಾಗಿ ಹೇಳುತ್ತೇನೆ.

ಸಮಗ್ರ ಪ್ರಪಂಚವು ತಿಳಿದಿರುವಂತೆ ನಾನೊಬ್ಬ ನಮತಾವಾದಿ, ನನಗೆ ನಾಲ್ಕು ಜನ ಗಂಡುಮಕ್ಕಳೂ, ನಾಲ್ಕು ಜನ ಹೆಣ್ಣುಮಕ್ಕಳೂ ಇದ್ದಾರೆ.

ಗಂಡುಮಕ್ಕಳು ತಮಗೆಬೇಕಾದ ಕನ್ಯೆಯರನ್ನು ತಾವೇ ನೋಡಿ ಕೊಳ್ಳುತ್ತಿರುವುದರಿಂದಲೂ ಹೆಣ್ಣುಮಕ್ಕಳು ತಮಗೆ ಬೇಕಾದ ವರಗಳನ್ನು ತಾವೇ ಹುಡುಕಿಕೊಳ್ಳುತ್ತಿರುವುದರಿಂದಲೂ (ಈಗಿನ ಕಾಲಕ್ಕೆ ತಕ್ಕಂತೆ) ಅವರವರ ಮದುವೆ ಯೋಚನೆಯನ್ನು ಅವರಿಗೇ ಬಿಟ್ಟಿದ್ದೇನೆ.

ನನ್ನ ಸಮಗ್ರ ಆಸ್ತಿಪಾಸ್ತಿಗಳ ಹಂಚಿಕೆಯನ್ನು ಈ ರೀತಿ ಮಾಡಿರು ತ್ತೇನೆ.

ನಾನು ವಾಸವಾಗಿರುವ ಬಾಡಿಗೆ ಮನೆಯನ್ನು —ಅದಕ್ಕೆ ಕೊಡಬೇ ಕಾಗಿರುವ ಹತ್ತು ತಿಂಗಳ ಬಾಡಿಗೆ ಸಮೇತ-ಆ ಮನೆಯ ಮಾಲೀಕರಿಗೆ ವಾಪಸು ಬಿಟ್ಟಿದ್ದೇನೆ. ಅವರು ನನ್ನ ಮೇಲೆ ಹೂಡಿರುವ 'ಎವಿಕ್ಷನ್' ಕೇಸನ್ನು ವಾಪಸು ತೆಗೆದುಕೊಳ್ಳುವರೆಂದು ನಂಬಿದ್ದೇನೆ.

ನನಗೆ ಸಾಲ ಕೊಟ್ಟಿರುವ, ಹಾಲು ಮೊಸರಿನವರು, ಬಟ್ಟೆ-ಅಂಗಡಿಯ ವರು, ದಿನಸಿ ಅಂಗಡಿಯವರು ಮತ್ತು ಕೈಗಡಗಳನ್ನು ಕೊಟ್ಟ ಇತರ ಸಾಲ ಗಾರರು ತಾವು ಮಾಡಿದ ತಪ್ಪಿಗೆ ತಾವೇ ಶಿಕ್ಷೆ ಅನುಭವಿಸಲಿ. ಏಕೆಂದರೆ ತಿಳಿದೂ

ತಿಳಿದು ನನ್ನಂತವನಿಗೆ ಅವರು ಸಾಲ ಕೊಟ್ಟಿದ್ದು ಅವರದೇ ಅಕ್ಷಮ್ಯ ಅಪರಾಧ. ನನಗೆ ಯಾರೂ ನೂರು-ಸಾವಿಗಟ್ಟಲೆ ಸಾಲ ಕೊಟ್ಟಿಲ್ಲ. ದೂರ ದೃಷ್ಟಿಯುಳ್ಳ ಅವರಿಗೆ ನನ್ನ ಹೃತ್ಪೂರ್ವಕ ಅಭಿವಂದನೆಗಳು.

ನಾನು ನಿಧನನಾದಮೇಲೆ ಬರುವ "ಅನುತಾಪ ಸಂತಾಪಗಳು, ತುಂಬ ಲಾರದ ಕೊರತೆ, ನಾಡಿಗೆ ಉಂಟಾಗಿರುವ ಅಪಾರ ನಷ್ಟ, ಯಾರ ಕೈಗೂ ಸಿಗದಿರುವ ನನ್ನ ಆತ್ಮಕ್ಕೆ ಕೋರಿರುವ ಚಿರಶಾಂತಿ, ಮತ್ತು ನನ್ನಲ್ಲಿ ಇಲ್ಲದೆ ಇದ್ದ ಸದ್ಗುಣಗಳನ್ನು ನನಗೆ ಆರೋಪಿಸಿ ನನ್ನ ಬಗ್ಗೆ ಬರೆಯಲ್ಪಟ್ಟಂಥ ಪ್ರಶಂಸನಾತ್ಮಕ ಲೇಖನಗಳು, ನನ್ನ ಹೆಸರಿನ ಮೇಲೆ ನಡೆಸಲ್ಪಡಬಹುದಾದ ಚರ್ಚಾಕೂಟ, ಕ್ರೀಡಾಸ್ಪರ್ಧೆಗಳು, ಮತ್ತು ಬಂಧುಬಳಗದವರು ದುಃಖ ಭರಿಸಲು ಕೋರುವ ನಿರ್ಣಯಗಳು" ಮುಂತಾದ ನಿರುಪಯೋಗೀ ವಿಷಯಗಳನ್ನೆಲ್ಲ ನನ್ನ ಎಂಟು ಮಂದಿ ಮಕ್ಕಳೂ ಸಮವಾಗಿ ಹಂಚಿಕೊಳ್ಳಲೆಂದು ಸೂಚಿಸ ಬಯಸುತ್ತೇನೆ.

ನನ್ನಲ್ಲಿರುವ ಪುಸ್ತಕಗಳ ಹಂಚಿಕೆ. ನನ್ನ ಸ್ವಂತ ಪುಸ್ತಕಗಳನ್ನೆಲ್ಲ ಇತರರು ಎರವಲು ತೆಗೆದುಕೊಂಡು ಹೋಗಿ ವಾಪಸು ಕೊಟ್ಟಿಲ್ಲ. ಮತ್ತು ನಾನೂ ಸಹ ಇತರರ ಪುಸ್ತಕಗಳನ್ನು ವಾಪಸು ಮಾಡಿಲ್ಲ ಆದುದರಿಂದ ಈಗಿರುವ ಪುಸ್ತಕಗಳೆಲ್ಲ ನನ್ನವೇ ಎಂದು ಧಾರಾಳವಾಗಿ ಹೇಳಬಹುದು. ಈ ಪುಸ್ತಕಗಳನ್ನೆಲ್ಲ "ಕನ್ನಡ ಪುಸ್ತಕಗಳಲ್ಲಿ ಹುರುಳಿಲ್ಲ" ಎಂದು ಅವನ್ನೋದದೆ ಇತ್ತಂಡ ವಾದಿಸುವವರಿಗೆ ಬಹುಮಾನವಾಗಿ ಕೊಡಲು ಆಶಿಸುತ್ತೇನೆ.

ಈ ಊರಿನ ನಗರ ನಿರ್ಮಲೀಕರಣದ ಬಗ್ಗೆ ನನಗೆ ತುಂಬಾ ನಂಬಿಕೆ ಇರುವುದರಿಂದ ನನ್ನ ಶವಸಂಸ್ಕಾರ ಕಾರ್ಯವನ್ನು ನಗರ ಸಭೆಗೇ ಬಿಟ್ಟಿದ್ದೇನೆ.

ನಾನು ಮಾಡಿದ ಪಾಪ ಪುಣ್ಯಗಳಿಗೆಲ್ಲ ಸಮಾಜವೇ ಹೊಣೆಯಾದ್ದರಿಂದ ಅವನ್ನು ಅದಕ್ಕೆ ಬಿಟ್ಟುಬಿಟ್ಟಿದ್ದೇನೆ. ನನಗೂ ಈ ಪಾಪ ಪುಣ್ಯಗಳಿಗೂ ಯಾವ ಸಂಬಂಧವೂ ಇಲ್ಲವೆಂದು ಈ ಮೂಲಕ ತಿಳಿಸಲಿಚ್ಛಿಸುತ್ತೇನೆ.

ದೈವವಶಾತ್ ಅಥವಾ ದುರ್ದೈವವಶಾತ್ ನಾನು ಪತ್ರಿಕಾ ವೃತ್ತಿಯನ್ನು ಕೈಕೊಂಡೆ. ಈ ವೃತ್ತಿಯನ್ನು ನನ್ನ ವಂಶೀಕರಾರೂ ಕೈಕೊಳ್ಳಕೂಡದೆಂದು ಈ ಮೂಲಕ ಅವರಿಗೆ ಮುನ್ನೆಚ್ಚರಿಕೆ ಕೊಡುತ್ತೇನೆ.

---

# ಅಳಿಯನ ಸಾಹಸ

ಪಳ್ಳಿಯ ಅಳಿಯನೊಬ್ಬ ಮೊದಲವರ್ಷ ದೀಪಾವಳಿ ಹಬ್ಬಕ್ಕೆ ಮಾವನ ಮನೆಗೆ ಹೋಗಬೇಕಾಗಿತ್ತು. ಮಾವ ಇದ್ದ ಪಳ್ಳಿಗೂ ಇವನ ಹಳ್ಳಿಗೂ ಒಂಬತ್ತು ಮೈಲಿದೂರವಿತ್ತು. ಅಳಿಯ ದೊಡ್ಡದೊಂದು ಟ್ರಂಕು,ಹಾಸಿಗೆಯನ್ನು ಸಿದ್ಧಗೊಳಿಸಿದ. ಮಾವನ ಹಳ್ಳಿಗೆ ಹೋಗುವ ಗಾಡಿಯಾವುದೂ ಸಿಕ್ಕಲಿಲ್ಲ. ಕೂಲಿಯವನ ತಲೆಯ ಮೇಲೆ ಹಾಸಿಗೆ ಟ್ರಂಕುಗಳನ್ನು ಹೊರಿಸಿಕೊಂಡು ಹೋಗಲು ನಿರ್ಧರಿಸಿದ.

ಕಷ್ಟಪಟ್ಟು ಒಬ್ಬ ಕೂಲಿಯವನನ್ನು ಹಿಡಿದುಕೊಂಡು ಬಂದ. ಈ ಹಾಸಿಗೆ ಟ್ರಂಕುಗಳನ್ನು ನೋಡುತ್ತಲೇ ಅವನ ಎದೆ ಧಸ್ಸೆಂದಿತು. ಆದರೂ ಅಳಿಯನ ಒತ್ತಾಯಕ್ಕೆ, ಅವನು ಹೆಚ್ಚು ಕೂಲಿ ಕೊಡಲು ತೋರಿಸಿದ ಆಸೆಗೆ ಅವನ್ನು ಹೊತ್ತುಕೊಂಡು ಹೊರಟ. ಕೂಲಿಯಾಳು ಹಾಸಿಗೆ ಟ್ರಂಕುಗಳನ್ನು ಅದೇ ಹಳ್ಳಿಯ ಹೊರಗಿದ್ದ ಅರಳೀಕಟ್ಟೆಯ ಮೇಲಿರಿಸಿ, 'ಸ್ವಾಮಿ, ಈ ಹಾಸಿಗೆ ಟ್ರಂಕುಗಳು ಹೆಣಭಾರ ಇವೆ. ಇವನ್ನು ಹೊತ್ತುಕೊಂಡು ಒಂಬತ್ತು ಮೈಲಿ ನಡೆಯುವುದು ನನ್ನಿಂದ ಸಾಧ್ಯವಿಲ್ಲ. ನೀವೇನಾದರೂ ಬೇರೆ ಏರ್ಪಾಟು ಮಾಡಿಕೊಳ್ಳಿ" ಎಂದು ಹೇಳಿದ. ಆದರೆ ಅಳಿಯ ಆಗಲೇ ಮಾವನ ಹಳ್ಳಿಗೆ ಹೋಗಲೇಬೇಕಾಗಿತ್ತು, ಅಲ್ಲದೆ ಬೇರೆ ಕೂಲಿಯವರನ್ನು ಆ ಹೊತ್ತಿನಲ್ಲಿ ಹುಡುಕುವುದು ಸಾಧ್ಯವಿರಲಿಲ್ಲ. ಅಳಿಯ ಸ್ವಲ್ಪ ಯೋಚಿಸಿ, "ಅಯ್ಯಾ ಒಂದು ಕೆಲಸ ಮಾಡು, ಈ ಹಾಸಿಗೆ ಟ್ರಂಕುಗಳನ್ನು ಒಂಬತ್ತು ಮೈಲಿ ದೂರ ನಾನೇ ಹೊತ್ತುಕೊಂಡು ಬರುತ್ತೇನೆ. ನೀನು ನನ್ನ ಜೊತೆ ಬಾ. ನಮ್ಮ ಮಾವನವರ ಹಳ್ಳಿಯ ಹೊರಗಿರುವ ಅರಳೀಕಟ್ಟೆಯ ಮೇಲೆ ಈ ಹಾಸಿಗೆ ಟ್ರಂಕುಗಳನ್ನಿಡುತ್ತೇನೆ. ನೀನು ಅಲ್ಲಿಂದ ನಮ್ಮ ಮಾವನವರ ಮನೆಗೆ ತಂದು ಮುಟ್ಟಿಸು" ಅಂತ ಹೇಳಿದ ಕೂಲಿಯವನು ಈ ಏರ್ಪಾಟಿಗೆ ಒಪ್ಪಿಕೊಂಡ.

ಮಾವನ ಹಳ್ಳಿ ಬಂದಿತು ಅಳಿಯ ಹಾಸಿಗೆ ಟ್ರಂಕುಗಳನ್ನು ಆ

ಹಳ್ಳಿಯ ಊರ ಹೊರಗಿದ್ದ ಅರಳೀಮರದ ಕಟ್ಟೆಯ ಮೇಲಿರಿಸಿದ. ಟ್ರಂಕು ತೆಗೆದು ಜರತಾರೀ ಪಂಚೆಯುಟ್ಟು, ಸಿಲ್ಕ್ ಷರ್ಟ್ ಹಾಕಿದ, ಜರತಾರೀ ಶಲ್ಯ ವೊಂದನ್ನು ಹಾಗೇ ಹೊದೆದ. ಕೂಲಿಯವನಿಗೆ ಮಾವನ ಮನೆ ಇರುವ ಗುರ್ತುಗಳನ್ನು ತಿಳಿಸಿ ತಾನು ಮುಂದಾಗಿ ಠೀವಿಯಿಂದ ಮಾವನ ಮನೆಗೆ ಹೋದ.

ಅಳಿಯ ಬರುತ್ತಲೇ ಮಾವನವರು ಆದರದ ಸ್ವಾಗತ ನೀಡಿದರು. ಉಭಯಕುಶಲೋಪರಿಗಳಾದ ತರುವಾಯ "ನಿಮ್ಮ ಸಾಮಾನುಗಳೆಲ್ಲಿ ?" ಎಂದು ಮಾವನವರು ಕೇಳಿದರು. "ಆಳು ತೆಗೆದುಕೊಂಡು ಬರುತ್ತಿದಾನೆ" ಎಂದು ಅಳಿಯ ಠೀವಿಯಿಂದಲೇ ಹೇಳಿದ.

ಅಷ್ಟು ಹೊತ್ತಿಗೆ ಕೂಲಿಯವನು ಹಾಸಿಗೆ ಟ್ರಂಕುಗಳನ್ನು ಹೊತ್ತು ಕೊಂಡು ಏದುತ್ತಾ ಬಂದ. ಅಳಿಯನ ಮೆಚ್ಚುಗೆ ಪಡೆಯಲು ಅವರ ಮಾವನ ವರಿಗೆ ಈ ರೀತಿ ಹೇಳಿದ, "ಸ್ವಾಮೀ, ನಿಮ್ಮ ಅಳಿಯಂದಿರು ಬಹಳ ಗಟ್ಟಿಗರು. ನಾನು ಈ ಸಾಮಾನುಗಳನ್ನು ಈ ಊರಿನ ಅರಳೀಕಟ್ಟೆಯಿಂದ ತರುವುದರಲ್ಲಿ ನೀರು ಕಿತ್ಕೋಯ್ತು, ಅವರು ನಮ್ಮ ಊರಿನಿಂದ ಒಂಬತ್ತು ಮೈಲಿ ಅದು ಹೆಂಗೆ ತಗಂಡು ಬಂದರೋ ದೇವರೇ ಬಲ್ಲ" ಅಂತ ಹೇಳಿದ. ಮಾವ ಅಳಿಯನ ಮುಖ ನೋಡಿದ. ಅಳಿಯ ನೆಲವನ್ನು ನೋಡುತ್ತಿದ್ದ.

* * *

ಹಿಂದೂ ಕೋಡ್ ಬಿಲ್ ಮೇಲೆ ೫೬೦ ತಿದ್ದುಪಡಿಗಳು ಸೂಚಿಸಲ್ಪಟ್ಟಿವೆ ಯಂತೆ.

—ನಮ್ಮ ತಲೆಮಾರಿನಲ್ಲಿಯೇ ಈ ಬಿಲ್ ವಿಷಯ ಏನಾಗುತ್ತದೆಂದು ಹೇಳಲು ಸಾಧ್ಯವಿಲ್ಲ.

* * *

## ಲಾಂಡ್ರಿ ಮುಂದಿರುವ ಬೋರ್ಡ್

ಅರ್ಜಂಟ್ ಬಟ್ಟೆಗಳನ್ನು ಯಾವೊತ್ತಾದರೂ ಒಂದು ದಿನ ಕೊಡು ತ್ತೇವೆ.

# ಕವಿ ಹೃದಯ

ಕವಿಗಳಿಗೆ ವ್ಯವಹಾರಜ್ಞಾನ ಇಲ್ಲ ಎಂಬುದು ಸರ್ವ ಸಮ್ಮತವಾದ ವಿಷಯ. ಓಡುವ ಲೋಕಕ್ಕೂ ಅವರಿಗೂ ಯಾವ ಸಂಬಂಧವೂ ಇಲ್ಲವಂತೆ. ಹಾಗಾದರೆ ಓಡುವ ಲೋಕದ ವಿಷಯಗಳ ಬಗ್ಗೆ ಅವರು ಅಧಿಕಾರಯುತ ವಾಗಿ ಮಾತನಾಡುವುದು ದಾಷ್ಟಿಕತೆಯ ಪರಾಕಾಷ್ಠೆ. ಕವಿಗಳು ಭಾವ ಜೀವಿಗಳಂತೆ. ನಮ್ಮ ಹಾಗೆ ಅವರು ರೇಷನ್ ಜೀವಿಗಳಾಗಿದ್ದರೆ ನಮಗೆ ಸಂಬಂಧ ಪಟ್ಟ ವಿಷಯಗಳನ್ನು ಸರಿಯಾಗೇ ಬರೆಯುತ್ತಿದ್ದರು.

ಕವಿಯೊಬ್ಬನು ಮಲೆನಾಡಿನ ಭವ್ಯ ಚಿತ್ರವನ್ನು ವರ್ಣಿಸಿದ್ದಾನೆ. ಆಕಾ ಶದ ಅಂಚನ್ನು ಚುಂಬಿಸುವ ವೃಕ್ಷಗಳು, ಎಲೆಕ್ಟ್ರಿಕ್ ತಂತಿಯನ್ನು ಮೀರಿಸಿದ ಬಳ್ಳಿಗಳು, ರಂಗು ರಂಗಿನ ಹೂಗಳು, ಇವುಗಳ ವಿಚಾರವಾಗಿ ತಲೆ ಚಿಟ್ಟು ಹಿಡಿಯುವಂತೆ ಬರೆದಿದ್ದಾನೆ. ಮಲೆನಾಡಿನಲ್ಲಿ ಜನಗಳು ಬೆಳೆಯದೆ ಮರ ಗಿಡಗಳು ಬೆಳೆಯುತ್ತವೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಕವಿ, ಜನ ಗಳ ವಿಷಯವನ್ನೇ ಬದಿಗೊತ್ತಿ ನಿರ್ಜೀವ ಮರಗಿಡಗಳ ವಿಚಾರವಾಗಿ ಹುಚ್ಚು ಹುಚ್ಚಾಗಿ ಹಾಡುತ್ತಾನೆ. ಮಲೆನಾಡಿನಲ್ಲಿ ಗಂಡಸರಿಗೂ ಗರ್ಭವಿರುತ್ತದೆ— ಮಲೇರಿಯಾ ಗಡ್ಡೆಯಿಂದ. ಆಕಾಶ ತೂತು ಬಿದ್ದಿದೆಯೇನೋ ಎಂಬಂತೆ ಮಳೆ ಬಕೆಟ್‌ನಿಂದ ಸುರಿಯುತ್ತಿರುತ್ತದೆ. ಕಾಲುಗಳಲ್ಲಿ ಕೆಸರು ಹುಣ್ಣು ನರ್ತಕಿ ಕಟ್ಟಿರುವ ಗೆಜ್ಜೆಗಳ ಗೊಂಚಲಿನಂತಿರುತ್ತದೆ. ನಾಲ್ಕು— ಐದುದಿನ ಸೂರ್ಯ ದರ್ಶನವಿಲ್ಲದೆ, ಒಗೆದ ಬಟ್ಟೆಗಳು ಒಗೆದ ದಿನ ಹೇಗೆ ತಣ್ಣಗೆ ಇರು ತ್ತವೆಯೋ ಹಾಗೇ ಐದು ದಿನ ಕಳೆದರೂ ತಣ್ಣಗೆ ಇರುತ್ತವೆ. ಹಾಲು ಹೈನಿನ ವಿಚಾರ ಎಷ್ಟು ಹೇಳಿದರೂ ತೀರದು. ದೊಡ್ಡಿ ತುಂಬ ದನಗಳಿದ್ದರೂ ಒಂದು ಲೋಟ ಕಾಫಿ ತಯಾರಿಸಲು ಹಾಲಿಗೆ ಗತಿ ಇರುವುದಿಲ್ಲ. ಗೋದಾ ನಕ್ಕೆ ಕೊಡಬಹುದಾದ ರಾಸುಗಳೇ ಹೆಚ್ಚು. ಬಯಲು ಸೀಮೆಯಲ್ಲಿ ಒಂದು ಲೋಟ ಹಾಲಿನಿಂದ ಎಷ್ಟು ಕಪ್ ಕಾಫಿ ಮಾಡಬಹುದು ಎಂದು ಪ್ರಶ್ನೆ

ಹಾಕಿಕೊಳ್ಳುತ್ತಾರೆ. ಆದರೆ ಮಲೆನಾಡಿನಲ್ಲಿ ಎಷ್ಟು ದನಗಳಿದ್ದರೆ ಒಂದು ಲೋಟ ಕಾಫಿ ತಯಾರಿಸುವಷ್ಟು ಹಾಲು ಸಿಕ್ಕುತ್ತದೆ ಎಂದು ತಲೆ ಕೆಡಿಸಿಕೊಳ್ಳುತ್ತಾರೆ.

ಹೆಜ್ಜೆ ಇಟ್ಟಲ್ಲಿ ಜಿಗಣೆ ಕಾಲು ತಿನ್ನಲಾರಂಭಿಸುತ್ತದೆ. ಅದರ ಅನಾಹುತ ನಮಗೆ ತಿಳಿಯಬೇಕಾದರೆ ರಕ್ತಪಾತವಾದ ಮೇಲೇ. ಕಿವಿ ತೂತು ಬೀಳುವಂತೆ ಗಾಳಿ ಭೋರೆಂದು ಮೊರೆಯುತ್ತಿರುತ್ತದೆ. ಕಟ್ಟದ ಗಂಟು, ಡಬ್ಬಗಳು, ಪೆಟ್ಟಿಗೆಗಳಲ್ಲಿನ ಸಾಮಾನುಗಳು ಭಸ್ಮಧಾರಿಗಳಾಗಿರುತ್ತವೆ— ಬೂಸರ ಬಂದು.

ಕಣ್ಣು ಹೊರಳಿಸಿದಲ್ಲಿ— ಹಾವುಗಳು. ಅವುಗಳ ಹೆಸರುಗಳನ್ನು ಹೇಳಲು ನನಗೆ ಬಾರದು. ಅವುಗಳ ವಿಷಯ ಮತ್ತು ಇತರ ಧ್ವಂಸ ಶಕ್ತಿಗಳನ್ನು ಮಲೆನಾಡಿನವರ ಬಾಯಿಂದಲೇ ಕೇಳಬೇಕು.

ಪ್ರತಿಯೊಬ್ಬನಿಗೂ—ಳಿಗೂ— ವರ್ಷದ ಎಲ್ಲ ಋತುಗಳಲ್ಲಿಯೂ ಬೆಂಕಿ, ಬಿಸಿನೀರು ಪಥ್ಯದ ಬಾಣಂತಿತನ ಆಗುತ್ತಲೇ ಇರಬೇಕು.

ಪರಿಸ್ಥಿತಿ ಹೀಗಿರುವಾಗ ಕವಿ ಯಾವುದೋ ಒಂದು ಹೆಮ್ಮರವನ್ನು ನೋಡಿ ಬಾಯಿಬಾಯಿ ಬಿಟ್ಟು ಹುಚ್ಚು ಹುಚ್ಚಾಗಿ ಹಾಡಿದರೆ, ಮಲೆನಾಡಿನ ಜನ ಏನೆಂದಾರು? ಅವನಿಗೆ ವ್ಯವಹಾರ ಜ್ಞಾನ ಇಲ್ಲವೆನ್ನುವುದು ಮೇಲಿನ ಒಂದಂಶದಿಂದ ಸ್ಪಷ್ಟವಾಗುವುದಿಲ್ಲವೇ?

ಕವಿಗಳಿಗೂ ದನಕಾಯುವ ಹುಡುಗರಿಗೂ ಅದೇನೋ ಒಂದು ನಂಟು ದನಕಾಯುವ ಹುಡುಗನನ್ನು ಕವಿಗಳು ಗೋಪಾಲಕೃಷ್ಣನಿಗೆ ಹೋಲಿಸುತ್ತಾರೆ. ದನಕಾಯುವ ಹುಡುಗ ಜಗತ್ತಿನ ಎಲ್ಲ ವ್ಯಾಪಾರಗಳನ್ನು ಮರೆತು ಕೊಳಲೂದುವುದರಲ್ಲಿ ಮಗ್ನನಾಗಿರುತ್ತಾನಂತೆ. ಅವನು ಕರ್ಮಯೋಗಿಯಂತೆ!

ದನಕಾಯುವವನು ನಮ್ಮ ಸಮಾಜದ ಇಚ್ಚಣಿಕೆಯಲ್ಲಿ ಮೊದಲಿನ ಮೆಟ್ಟಲನ್ನು ಅಲಂಕರಿಸುತ್ತಾನೆ. ಬುದ್ಧಿ ಇಲ್ಲದ ಮನುಷ್ಯನನ್ನು "ದನ ಕಾಯು

ವನ" ಎಂದು ಸಂಭೋಧಿಸುವುದು ವಾಡಿಕೆಯಲ್ಲಿದೆ ಯಾವ ಕೆಲಸವನ್ನೂ ಮಾಡಲಾರದವನಿಗೆ ಕಟ್ಟಕಡೆಯ ಕೆಲಸವೆಂದರೆ ದನಕಾಯುವ ಕೆಲಸ.

ಹೊತ್ತು ಹೋಗದ್ದಕ್ಕೆ ದನಕಾಯುವ ಹುಡುಗ ಬಿದಿರಿನಿಂದ ಕೊಳಲು ಮಾಡಿಕೊಂಡು, ಅದನ್ನು ಊದುತ್ತಿರುತ್ತಾನೆ. ಅದನ್ನು ಅಪಸ್ವರದಲ್ಲಿಯೇ ಊದುತ್ತಾನೆ. ಆ ಕೊಳಲೂದಿಗೆ ದನಗಳು ಓಡಿ ಹೋಗುತ್ತವೆಯೇ ವಿನಾ ಹತ್ತಿರ ಬರುವುದಿಲ್ಲ. ಆ ಗಬ್ಬು ಕೊಳಲಿಗೆ ಅದೆಷ್ಟು ಅವಾಂತರ.

ಮಾನ ಮರ್ಯಾದೆ ಮುಚ್ಚಲು ಸಾಧ್ಯವಾಗದ ಅವನ ತುಂಡಂಗಿ ನೀರುಕಂಡು ಅದೆಷ್ಟು ತಿಂಗಳುಗಳಾಗಿರುತ್ತವೆಯೋ? ಇವನ ಸರಳ ಸ್ವಭಾವ ನೋಡಿ ಕವಿ ಮುಗ್ಧನಾಗುತ್ತಾನಂತೆ. ದನಕಾಯುವವನು ಸರಳಸ್ವಭಾವ ದವನಾಗಿರದೆ ಇನ್ನೇನು ಆಗಲು ಸಾಧ್ಯ. ಅವನಲ್ಲಿ ಬೇರೆ ಏನಾದರೂ ಗುಣ ಗಳಿದ್ದರೆ ಅವನೇಕೆ ದನ ಕಾಯುತ್ತಿದ್ದ ? ಎಲ್ಲಾ ಹುಚ್ಚು ಹುಚ್ಚು.

ದನ ಕಾಯುವವನು ಕರ್ಮಯೋಗಿ ಎಂದು ಕವಿಗಳು ಹೇಳುತ್ತಾರೆ. 'ಲಾಭಾಲಾಭೌ ಜಯಾಜಯೌ' ಅವನಿಗಾವ ಪರಿಣಾಮವನ್ನೂ ಉಂಟು ಮಾಡುವುದಿಲ್ಲವಂತೆ.' ಈ ಕಾರಣದಿಂದ ಅವನು ಕರ್ಮಯೋಗಿಯಾದರೆ ಕರ್ಮಯೋಗಿಗಳೆಲ್ಲ ದನ ಕಾಯುವವರು ಎಂದು ಪರ್ಯಾಯವಾಗಿ ಹೇಳಿದಂ ತಾಯಿತು. ಮೊನ್ನೆ ಒಬ್ಬ ದನಕಾಯುವ ಹುಡುಗ ನನಗೆ ಸಿಕ್ಕಿದ್ದ. "ನಮ್ಮ ಮೇಲೆಲ್ಲಾ ಕವಿಗಳು ಏನೇನೋ ಹೇಳ್ತಾರಂತೆ ಅವರು ನನ್ನಕೈಗೆ ಸಿಕ್ಕಲಿ" ಎಂದು ಹೇಳಿದ.

ಭಾವಜೀವಿಗಳಾದ ಕವಿಗಳು ಕೆಲವು ಸಾರಿ ಹೆಂಗಸರ ಬಗ್ಗೆ ಹುಚ್ಚು ಹುಚ್ಚಾಗಿ ಹರಟುವುದೂ ಉಂಟು. "ಸ್ವಪ್ನಸುಂದರಿ" "ಕನಸಿನ ರಾಣಿ" "ಕಲ್ಪನೆಯ ಲಕ್ಷ್ಮಿ" ಎಂದು ಅಸಂಖ್ಯಾತ ಕವಿತೆಗಳನ್ನು ಗೀಚಿದ್ದಾರೆ. ಅವರು ವರ್ಣಿಸಿರುವ ಹೆಂಗಸರನ್ನು ನಾನು ಇಪ್ಪತ್ತು ವರ್ಷಗಳಿಂದ ಹುಡುಕುತ್ತಿದ್ದೇನೆ, ಎಲ್ಲಿಯೂ ಸಿಕ್ಕಿಲ್ಲ. ಒಬ್ಬಳೇ ಹೆಂಗಸಿನಲ್ಲಿ ಆ ಅಂಗಸೌಷ್ಠವ, ಆ ಬಣ್ಣ ಒರೆ ಗಳು, ಅದು ಹೇಗೆ ಸಂಧಿಸಿರುತ್ತವೆಯೋ ಕವಿಯೇ ಹೇಳಬೇಕು ಹೆಂಗಸಿನ

ರೂಪು ಪರಿಪೂರ್ಣವಾದುದಲ್ಲ ಎಂದು ಗ್ರೀಕ್ ಶಿಲ್ಪಚತುರರ ಅಭಿಪ್ರಾಯ. ಈ ಕಾರಣದಿಂದಲೇ ಅವರು ಅಪಲೋವನ್ನು ಸೌಂದರ್ಯದ ಅಧಿದೇವತೆಯನ್ನಾಗಿ ಆರಿಸಿಕೊಂಡಿದ್ದಾರೆ. ನಾವು ಕಾಣುವ ಹೆಂಗಸರಲ್ಲಿ ಏನೋ ಒಂದು ಊನ, ಕುಂದು, ಕೊರತೆ ಇದ್ದೇ ಇರುತ್ತದೆ. ಕವಿ ವರ್ಣಿಸುವ ಗುಣಗಳೆಲ್ಲ ಒಬ್ಬಳಲ್ಲೇ ಆವಿರ್ಭವಿಸುವುದು ಹಾಸ್ಯಾಸ್ಪದವಾದುದು. ಹೆಂಗಸರ ಬಟ್ಟೆಯ ದಾಹ, ನೆನಸಿಕೊಂಡಾಕ್ಷಣ ಗಳಗಳನೆ ಅಳುವುದು, ಕ್ಷಣಕ್ಕೆ ಮೂರು ಬಾರಿ ಕೋಪಿಸಿಕೊಳ್ಳುವುದು ಮುಂತಾದ ಸ್ತ್ರೀಸಹಜವಾದ ಗುಣಗಳು ಕವಿಯ ಕಣ್ಣಿಗೆ ಬೀಳದಿರುವುದು ಆಶ್ಚರ್ಯಕರವಾದುದಲ್ಲದೆ, ವಿಷಾದ ಪಡತಕ್ಕ ಅಂಶವೂ ಆಗಿದೆ.

ಭಾವಜೀವಿಗಳಾದ ಕವಿಗಳಿಗೂ ರೀಷನ್ ಜೀವಿಗಳಾದ ನಮಗೂ ಇರುವ ವ್ಯತ್ಯಾಸವನ್ನು ತೋರಿಸಲು ಪ್ರಯತ್ನಿಸಿದ್ದೇನೆ, ಅಷ್ಟೇ!

*　　*　　*

## ಹಣವೆಂದರೆ ...........!

ಮಗುವೊಂದು ಅಂಬೆಗಾಲಿಕ್ಕುತ್ತ ಚರಂಡಿಯೊಳಕ್ಕೆ ಹೋಗಿ ಮಧ್ಯದಲ್ಲಿ ಕೂತುಕೊಂಡಿತು. ಚರಂಡಿಯ ಮೇಲೆ ದೊಡ್ಡದಾದ ಹಾಸುಗಲ್ಲುಗಳಿದ್ದವು. ಇತರರಾರೂ ಚರಂಡಿಯೊಳಕ್ಕೆ ಹೋಗಿ ಮಗುವನ್ನು ಕರೆದುಕೊಂಡು ಬರಲು ಸಾಧ್ಯವಿರಲಿಲ್ಲ. ಏನು ಮಾಡಿದರೂ ಮಗು ಆ ಸ್ಥಳದಿಂದ ಕದಲುವ ಲಕ್ಷಣ ಕಂಡುಬರಲಿಲ್ಲ.

ಚೂಟಿ ಮನುಷ್ಯನೊಬ್ಬ ಕೆಲವು ರೂಪಾಯಿಗಳನ್ನು ತಂದು ಚರಂಡಿಯ ಒಂದು ತುದಿಯಲ್ಲಿ ಝಣ ಝಣ ಶಬ್ದ ಮಾಡಿದ. ಮಗು ಆ ಶಬ್ದಕ್ಕೆ ಮನಸೋತು ಅಂಬೆಗಾಲಿಕ್ಕುತ್ತ ಆ ಕಡೆ ಹೋಯಿತು. ಅದನ್ನು ಮನೆಯವರು ಎತ್ತಿಕೊಂಡರು.

# ನಾಡಿಗೇರರೊಡನೆ ಭೇಟಿ

ನಾಡಿಗೇರರನ್ನು ನೋಡದವರೊಬ್ಬರು, ಈ ವಿಚಿತ್ರಪ್ರಾಣಿಯ ಪರಿಚಯ ಮಾಡಿಕೊಳ್ಳಲು ಅವರಿವರನ್ನು ಕೇಳಿ, ಕಷ್ಟಪಟ್ಟು ಅವರ ಮನೆಯನ್ನು ಹುಡುಕಿದರು. ಆದರೆ ನಾಡಿಗೇರರು "ಇಲ್ಲ" ಅಂತ ಹತ್ತಾರುಸಾರಿ ಅನ್ನಿಸಿಕೊಂಡಿದ್ದೂ ಆಯಿತು. ಅವರು ಒಳಗಿದ್ದರೂ ಮನೆಯಲ್ಲಿ "ಇಲ್ಲ" ಎಂತ ಅನ್ನಿಸಿಕೊಳ್ಳುತ್ತಿರಬಹುದೆಂಬ ಅನುಮಾನ ಬಂದಿತು. ಏನೋ ಅವರಿಗೆ ಒಂದು ತರಹೆ ಸ್ಫೂರ್ತಿ ಹುಟ್ಟಿ, "ನಾನು ನಾಡಿಗೇರರನ್ನು ಭೇಟಿಮಾಡಲು ಬಂದಿದ್ದೇನೆ. ಅವರೇನು ನನಗೆ ಸಾಲಕೊಡಬೇಕಾಗಿಲ್ಲ" ಎಂದು ಅವರು ಹೇಳಿದರು. ನಾಡಿಗೇರರು ಆ ಕೂಡಲೇ ದೇವರು ಪ್ರತ್ಯಕ್ಷವಾಗುವಂತೆ ಹಾಜರಾದರು. • ನಮುಸ್ಕಾರ ಚಮತ್ಕಾರಗಳಾದ ಮೇಲೆ, ಸಂಭಾಷಣೆ ಪ್ರಾರಂಭವಾಯಿತು.

"ನಿಮ್ಮನ್ನು ಭೇಟಿಮಾಡಲು ನಾನು ಹತ್ತಾರುಸಾರಿ ಬಂದೆ, ನೀವಿಲ್ಲ ಎಂತಲೇ ಹೇಳುತ್ತಿದ್ದರು."

"ನೀವು ಯಾರೋ ಸಾಲಗಾರರಿರಬಹುದು ಅಂತ ಆರೀತಿ ಹೇಳುತ್ತಿದ್ದರು. ಯಾರು ಬಂದರೂ 'ಇಲ್ಲ' ಅಂತ ಹೇಳಿ ಎಂದು ಸುಗ್ರೀವಾಜ್ಞೆ ಕೊಟ್ಟಿದ್ದೇನೆ."

"ಅಷ್ಟು ಯಾಕೆ ಸಾಲಮಾಡುತ್ತೀರಿ? ಮಿತವ್ಯಯದಿಂದ ಏಕೆ ಸಂಸಾರ ನಡೆಸಬಾರದು?"

"ಮಿತವ್ಯಯದ ಬಗ್ಗೆ ಒಂದು ಪುಸ್ತಕ ಬರೆಯುವಷ್ಟು ನನಗೆ ಗೊತ್ತಿದೆ. ಆದರೆ ಸುಲಭವಾಗಿ ಸಾಲ ಸಿಗುವಾಗ ಅದನ್ನೇಕೆ ದುರುಪಯೋಗಪಡಿಸಿಕೊಳ್ಳಬಾರದು?"

"ಹೋಗಲಿ, ನಿಮ್ಮಿಂದ ಕೆಲವು ವಿಚಾರಗಳ ಬಗ್ಗೆ ಪ್ರಶ್ನೆ ಕೇಳಬೇಕೆಂದಿದ್ದೇನೆ. ಸಮಂಜಸವಾಗಿ ಉತ್ತರ ಹೇಳುವಿರೋ?"

"ಉತ್ತರ ಹೇಳುವುದರಲ್ಲಿ ನನಗೆ ಸಾಕಷ್ಟು ಪರಿಶ್ರಮವಿದೆ. ಎರಡು ಹಟಮಾರಿ ಚಿಕ್ಕ ಮಕ್ಕಳು, ಹೆಂಡತಿ, ಸಾಲಗಾರರ ತಂಡ, ಇವರಿಗೆಲ್ಲ ಉತ್ತರ

ಹೇಳಿ ಸಮಾಧಾನಪಡಿಸುವ ಕಲೆ ಸಾಧಿಸಿದ್ದೇನೆ. ಈ ಗುಣಗಳಿದ್ದುದರಿಂದಲೇ ನಾನು ಯಶಸ್ವಿ ಉ(ಅ)ಪಸಂಪಾದಕನಾದದ್ದು."

"ನೀವು ಉಪಸಂಪಾದಕರಾಗಿ ಏನು ಸಂಪಾದಿಸಿದ್ದೀರಿ ?"

"ಸಾಲ ಮತ್ತು ನಿಷ್ಠೂರ."

"ನಿಮಗೆ ಯಾವ ಪುಸ್ತಕ ಕಂಡರೆ ಪ್ರೀತಿ ?"

"ಚೆಕ್ ಪುಸ್ತಕ."

"ನೀವು ಯಾವ ಬ್ರ್ಯಾಂಡ್ ಸಿಗರೇಟ್ ಸೇದುತ್ತೀರಿ ?"

"ಇತರರ ಬ್ರ್ಯಾಂಡ್."

"ನಿಮಗೆ ಎಂಥ ಊಟ ಪ್ರೀತಿ ?"

"ಕಂಡವರ ಮನೆ ಊಟ ಎಂಥದಿರಲಿ, 'ಪರನ್ನಾಂ ದುರ್ಲಭಂ', ಎಂಬುದು ನನಗೆ ಚೆನ್ನಾಗಿ ಗೊತ್ತು."

"ನೀವು ಇಷ್ಟು ಸರಳ ಜೀವನವನ್ನು ನಡೆಸುವುದರ ರಹಸ್ಯವೇನು ?"

"ಬೇರೆ ತರಹ ಜೀವನ ನಡೆಸುವ ಯೋಗ್ಯತೆ ಇಲ್ಲದ್ದಕ್ಕೆ."

"ಪತ್ರಿಕಾವೃತ್ತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ಅದೂ ಒಂದು ವೃತ್ತಿ—"

"ನಿಮ್ಮ ಪುಸ್ತಕಗಳಲ್ಲಿ ನಿಮ್ಮ ವಿಚಾರವಾಗಿಯೇ ಬರೆದುಕೊಂಡು ಟೀಕೆ ಮಾಡಿಕೊಂಡಿರುತ್ತೀರಿ, ಯಾಕೆ ?"

"ಇತರರ ಬಗ್ಗೆ ಆ ಮಾತುಗಳನ್ನು ಬರೆದರೆ ನನ್ನನ್ನು ಇಲ್ಲ ಅನ್ನಿಸುತ್ತಾರೆ. ಅದಕ್ಕೆ ನನ್ನ ಮೇಲೆಯೇ ಬರೆದುಕೊಳ್ಳುತ್ತೇನೆ. ಆಗ ನಾನು ಯಾರಿಂದಲೂ ಏಟು ತಿನ್ನಬೇಕಾದ ಪ್ರಮೇಯವಿರುವುದಿಲ್ಲ."

"ಜೀವನದ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ನಾನು ಯಾವ ಅಭಿಪ್ರಾಯವನ್ನೂ ಇಟ್ಟುಕೊಂಡಿಲ್ಲ. ಅದರ ಬಗ್ಗೆ ತಲೆ ಕೆಡಿಸಿಕೊಳ್ಳದಿರುವುದೇ ಕ್ಷೇಮ."

"ನಿಮ್ಮ ಜಾತಿ ಯಾವುದು ?"

"ದರಿದ್ರರ ಜಾತಿ. ಪ್ರಪಂಚದಲ್ಲಿ ಎರಡೇ ಜಾತಿಗಳಿರುವುದು

ಶ್ರೀಮಂತರ ಜಾತಿ, ದರಿದ್ರರ ಜಾತಿ. ನಾನು ಎರಡನೆಯ ಜಾತಿಗೆ ಸೇರಿದವನು."

"ನೀವು ಕಮ್ಯೂನಿಸ್ಟ್ ಹೌದೇ?"

"ನಾನು ಯಾವ 'ಇಸ್ಟೂ' ಅಲ್ಲ. ನಾನು ಜರ್ನಲಿಸ್ಟ್. ನಾನು ಹಾಕುವ ಕೊಳಕುಬಟ್ಟೆ, ಒಂದು ವಾರದ ಕುರಚಲು ಗಡ್ಡ, ಎಣ್ಣೆ ಬಾಚಣಿಗೆಗಳನ್ನು ಕಾಣದ ತಲೆ, ಇವುಗಳನ್ನು ನೋಡಿ ಹಾಗೆ ಹೇಳುತ್ತಾರೆ ಅಷ್ಟೆ."

"ನಿಮಗೆ ಅಕಸ್ಮಾತ್ತಾಗಿ ಅರ್ಧಲಕ್ಷ ಅಥವಾ ಒಂದುಲಕ್ಷ ರೂಪಾಯಿ ಸಿಕ್ಕರೆ ಏನು ಮಾಡುತ್ತೀರಿ?"

"ಹಳ್ಳಿಗೆ ಹೋಗಿ ಎಮ್ಮೆ ಕಟ್ಟಿಕೊಂಡು ಸುಖವಾಗಿರುತ್ತೇನೆ."

"ನಿಮ್ಮ ಮಾತಿನಲ್ಲಿ, ಬರಹದಲ್ಲಿ ಹಾಸ್ಯ ತುಂಬಿರುತ್ತದೆಂದು ಜನ ಹೇಳುತ್ತಾರೆ? ಈ ಹಾಸ್ಯ ತುಂಬಲು ನೀವೇನು ಮಾಡುತ್ತೀರಿ?"

"ನನ್ನಮಟ್ಟಿಗೆ ಹೇಳುವುದಾದರೆ, ಪ್ರಯತ್ನಪೂರ್ವಕವಾಗಿ ನಾನು ಹಾಸ್ಯ ತುಂಬಲು ಹೋಗುವುದಿಲ್ಲ. ನನಗೆ ತೋರಿದ್ದನ್ನು ಇದ್ದಹಾಗೆ ಯಾರ ಹಂಗಿಗೂ, ದಯೆ ದಾಕ್ಷಿಣ್ಯಕ್ಕೂ ಒಳಗಾಗದೆ ಹೇಳುತ್ತೇನೆ. ಈ ಸುಳ್ಳಿನ ಪ್ರಪಂಚದಲ್ಲಿ ಸತ್ಯವನ್ನು ನೋಡಿದಕೂಡಲೇ ಜನ ನಗುತ್ತಾರೆ. ಅದೇ ಹಾಸ್ಯವಿರಬೇಕೆಂದು ನನ್ನ ಭಾವನೆ."

"ನೀವು ಅನೇಕಸಾರಿ ವ್ಯಕ್ತಿಗಳ ಬಗ್ಗೆ ಬಹಳ ಕಟುವಾಗಿ, ನಿಷ್ಠೂರವಾಗಿ ಬರೆದಿರುತ್ತೀರಿ, ಅವರೇನೂ ನಿಮಗೆ ಮಾಡುವುದಿಲ್ಲವೇ?"

"ಇಲ್ಲ, ಯಾರೂ ಏನೂ ಮಾಡುವುದಿಲ್ಲ. ಕೆಲವರು ಇದೊಂದು ಬೊಗಳುವ ನಾಯಿ, ಬೊಗಳಿಕೊಳ್ಳಲಿ ಅನ್ನುತ್ತಾರೆ. ಮತ್ತೆ ಕೆಲವರು ಈ ಪ್ರಾಣಿಯ ಮೇಲೆ ಕೈಮಾಡಿದರೆ ಅದು ಉಳಿಯುವುದಿಲ್ಲ, ನಮಗೆ ಫಾಸೀ ಶಿಕ್ಷೆಯಾದೀತು ಅಂತ ಸುಮ್ಮನಿರುತ್ತಾರೆ. ಇನ್ನು ಕೆಲವರು, ರೊಚ್ಚೆಯಮೇಲೆ ಕಲ್ಲೆಸದಂತೆ, ಅದನ್ನು ತಡವದಿರುವುದೇ ಕ್ಷೇಮ ಅಂತ ಸುಮ್ಮನಿರುತ್ತಾರೆ."

"ನೀವು ಬರೆದಿರುವ ಪುಸ್ತಕಗಳಿಗೆ ಬಹಳ ಅಸಹ್ಯ ಹೆಸರುಗಳನ್ನು ಕೊಟ್ಟಿದ್ದೀರಿ. ನಿಮ್ಮ ಶಬ್ದಸಂಪತ್ತಿಯಲ್ಲಿ ಒಳ್ಳೆಯ ಹೆಸರುಗಳೇ ಇಲ್ಲವೆ?"

"ನಾಯಿಗೆ ಕಿನಕಾಪಿನ ಅಂಗಿ ತೊಡಿಸಿದರೂ ಅದು ನಾಯಿಯೇ ! ನನ್ನ ಬರೆಹಗಳ ಯೋಗ್ಯತೆಗೆ ತಕ್ಕಂಥ ಹೆಸರುಗಳನ್ನು ಕೊಡಬೇಕೆಂಬುದೇ ನನ್ನ ಉದ್ದಿಶ್ಯ."

"ಜನಗಳು ಹೇಳುವಷ್ಟು ನೀವು ಕೆಟ್ಟವರೇ ?"

"ಜನಗಳು ತಿಳಿದಿರುವಷ್ಟು ಕೆಟ್ಟವನಲ್ಲ"

"ನೀವು ಪತ್ರಿಕಾ ವ್ಯವಸಾಯವನ್ನು ಬಿಟ್ಟರೆ ಏನು ಮಾಡುವಿರಿ ?"

"ಯಾವುದಾದರೂ ಒಂದು ಸಿನಿಮಾದ ಹತ್ತಿರ ಬೀಡಿ ಅಂಗಡಿ ಇಡಬೇಕೆಂದು ಮಾಡಿದ್ದೇನೆ."

"ನೀವು ಕವಿತೆಗಳನ್ನೇಕೆ ಬರೆದಿಲ್ಲ ?

"ಅವನ್ನು ಬರೆಯದೆ ಇರುವುದರಿಂದಲೇ ಒಬ್ಬ ಒಳ್ಳೆಯ ಬರಹಗಾರ ಅನ್ನಿಸಿಕೊಂಡಿದ್ದೇನೆ ಅಂತ ತೋರುತ್ತೆ."

ಇಲ್ಲಿಗೆ ಸಂಭಾಷಣೆ ಕೊನೆಗೊಂಡಿತು. ಬಂದಿದ್ದ ಮಹಾಶಯರು ತೃಪ್ತಿಪೂರಕ ನಗೆ ಬೀರುತ್ತ ಹೊರಟರು.

* * *

## ಭಾರೀ ಅನ್ಯಾಯ

"ನಿಮ್ಮ ಮೋಟಾರು ಡ್ರೈವರು ನಿಮ್ಮ ಮಗಳನ್ನು ಓಡಿಸಿಕೊಂಡು ಹೋದನಂತೆ ನಿಜವೇ !"

"ನಿಜ ಸ್ವಾಮೀ, ನಿಜ"

"ಎಂಥ ಅನ್ಯಾಯ"

"ಹೌದು ಭಾರೀ ಅನ್ಯಾಯವಾಯಿತು, ಅಂಥ ಒಳ್ಳೆಯ ಮೋಟಾರು ಡ್ರೈವರ್ ಸಿಕ್ಕವುದು ಬಹಳ ಕಷ್ಟ."

* * *

# ಅಧ್ಯಕ್ಷ ಭಾಷಣಗಳ ತಯಾರಿಕೆ

ನನುಗೆ ಸ್ವಾತಂತ್ರ್ಯ ಬಂದಮೇಲೆ ಭಾಷಣ ಸ್ವಾತಂತ್ರ್ಯವೂ ಬಂದಿತು. ಇದನ್ನು ಉಪಯೋಗಿಸಿಕೊಳ್ಳದಿದ್ದರೆ ಹೇಗೆ? ಈ ಕಾರಣದಿಂದಲೇ ಭಾಷಣ ಮಾಡಲು ನಾವು ಎಲ್ಲ ಅವಕಾಶಗಳನ್ನು ಕಲ್ಪಿಸಿಕೊಳ್ಳುತ್ತೇವೆ. ಮನೆಯಲ್ಲಿ ಮಗು ಹುಟ್ಟಿದರೆ, ರೇಡಿಯೋ ತಂದರೆ, ಹೊಸ ಕಕ್ಕಸು ಕಟ್ಟಿಸಿದರೆ—ಒಂದು ಉತ್ಸವ ಮತ್ತು ಭಾಷಣಗಳೇರ್ಪಡುತ್ತವೆ ಪರಿಸ್ಥಿತಿ ಹೀಗಿರುವುದರಿಂದ ಅಧ್ಯಕ್ಷತೆ ವಹಿಸುವ ಸರದಿ ಎಲ್ಲರಿಗೂ ಬರಬಹುದಾಗಿದೆ. ಈ ಕಾರಣದಿಂದ ಅಧ್ಯಕ್ಷತೆ ವಹಿಸುವವರು ಬಹಳ ಸುಲಭವಾಗಿ ತಮ್ಮ ಜವಾಬ್ದಾರಿಯನ್ನು ಕಳಚಿ ಹಾಕುವುದು ಹೇಗೆ ಎಂಬ ಬಗ್ಗೆ ಕೆಲವು ಸೂಚನೆಗಳನ್ನು ಈ ಕೆಳಗೆ ಕೊಟ್ಟಿದ್ದೇನೆ. ಇವಕ್ಕೆ ಯಾವ ತರಹ ಕಾಪೀರೈಟ್ ಇಲ್ಲ. ಯಾರು ಬೇಕಾದರೂ ನನಗೆ ತಿಳಿಸದೆ ಹಾಗೆ ಉಪಯೋಗಿಸಿಕೊಳ್ಳಬಹುದು

ಸಭೆಯಲ್ಲಿ ಅಧ್ಯಕ್ಷತೆ ವಹಿಸಿದವನು ಎಂದಿಗೂ "ಗುಗ್ಗು" ಕೂತ ಹಾಗೆ ಕೂತಿರಬಾರದು. ಎಲ್ಲವನ್ನೂ ತಿಳಿದ ಸರ್ವಜ್ಞನಂತೆ ನಟಿಸಬೇಕು. ಭಾಷಣ ಕಾರರು ಮಾತನಾಡುತ್ತಿರುವಾಗ ವಿವಿಧ ಮುಖಭಂಗಿಗಳನ್ನು ಮಾಡಬೇಕು. ಕೆಲವುಸಾರಿ ಹಲ್ಲು ಗಿಂಜುವುದು, ಕೆಲವು ಸಾರಿ ಭಾಷಣಕಾರನನ್ನು ಓರೆನೋಟ ದಿಂದ ನೋಡುವುದು, ಕೆಲವು ಸಾರಿ "ಭಲಾ" ಎನ್ನುವುದು ಮಾಡುತ್ತಿರಬೇಕು. ಇವರಿಂದ ಸಭಿಕರು, ಅಧ್ಯಕ್ಷನಿಗೆ ತಿಳಿಯದ ವಿಷಯವಿಲ್ಲ ಎಂದು ತಿಳಿದುಕೊಳ್ಳು ತ್ತಾರೆ.

ಯಾವುದಾದರೂ ಸಂತಾಪಸೂಚಕಸಭೆಯ ಅಧ್ಯಕ್ಷತೆ ವಹಿಸಿದರೆ ದೊಡ್ಡ ಕರವಸ್ತ್ರವೊಂದನ್ನು ತೆಗೆದುಕೊಂಡು ಹೋಗಲು ಎಂದಿಗೂ ಮರೆಯಬೇಡಿ. ಸತ್ತವನ ಬಗ್ಗೆ ತಿಳಿದ ನಾಲ್ಕುಮಾತು ಹೇಳಿ. ಮಾತು ನಿಂತಕೂಡಲೇ ಕರ ವಸ್ತ್ರವನ್ನು ಕಣ್ಣಿಗೆ ಹಚ್ಚಿ. ದುಃಖ ಉಮ್ಮಳಿಸಿ ಮಾತು ಹೊರಡಲಿಲ್ಲವೆಂದು ಎಲ್ಲರೂ ನಿಮ್ಮ ಬಗ್ಗೆ ಸಹಾನುಭೂತಿಯುಳ್ಳವರಾಗುವರು ಸತ್ತವರ ನಷ್ಟ ದೇಶಕ್ಕೆ ಆಗಿರುವದಕ್ಕಿಂತ ನಿಮಗೆ ಹೆಚ್ಚಾಗಿದೆಯೆಂದು ಹೇಳಿ ಬಿಡಿ.

ನಿಮಗೂ ಸತ್ತವರಿಗೂ ಎಂಥ ಸ್ನೇಹ ಇತ್ತೆಂದು ಜನ ಆಶ್ಚರ್ಯಚಕಿತರಾಗುವರು.

ಸಾಂಸ್ಕೃತಿಕ ವಿಚಾರ ಸಭೆಗಳಲ್ಲಿ ಮಾತನಾಡುವಾಗ ಭಾರತದ ಗತವೈಭವದ ಬಗ್ಗೆ ನಿಮಗೆ ತೋಚಿದ್ದನ್ನು ಹೇಳಿ. ಅದು ಏನು ಎಂಬುದು ಯಾರಿಗೂ ತಿಳಿದಿಲ್ಲ. ಆದರೂ ಜನ ತಮ್ಮ ಹಿಂದಿನವರ ಬಗ್ಗೆ ಅಭಿಮಾನ ತಾಳಿ ಚಪ್ಪಾಳೆಹಾಕುತ್ತಾರೆ. ಈಗಿರುವದೆಲ್ಲಾ ಪೊಳ್ಳು, ಹಳೆಯದೆಲ್ಲಾ ಹೊನ್ನು ಅಂತ ಅರಚಿ.

ಕಾಂಗ್ರೆಸ್ ಭಾಷಣಗಳಾದಲ್ಲಿ ನೀವು ಏನು ಹೇಳಲೂ ಹೋಗಬೇಡಿ. ಶಾಂತಿ, ಶಿಸ್ತು ಎಂತ ಆರಂಭಿಸಿ, ಗಾಂಧೀಜಿ ಹೀಗೆ ಹೇಳಿದ್ದರು, ಹಾಗೆ ಹೇಳಿದ್ದರು ಎಂತ ನಿಮಗೆ ತೋಚಿದ್ದನ್ನು ಹೇಳಿ. ಆಗಾಗ್ಗೆ ನೆಹರು, ಪಟೇಲರ ಹೆಸರುಗಳನ್ನು ಉಚ್ಚರಿಸಿ.

ಅಧ್ಯಕ್ಷ ಭಾಷಣ ಮಾಡುವಾಗ, ಮೊದಲು ಮಾತನಾಡಿದ ಭಾಷಣಕಾರರ ಕೆಲವು ಮುಖ್ಯಾಂಶಗಳನ್ನು ಮತ್ತೆ ಮತ್ತೆ ಹೇಳಿ ಜನರೆಲ್ಲರೂ ಅವನ್ನು ಗಮನದಲ್ಲಿಡುವುದಾಗಿ ಹೇಳಿ. ಅವನ್ನು ನೆನಪಿಟ್ಟುಕೊಳ್ಳಲು ಸಾಧ್ಯವಾಗದಿದ್ದಲ್ಲಿ "ಭಾಷಣಕಾರರು ಹೇಳಿದ ಮಾತುಗಳನ್ನೇ ಪುನರ್ಪರಿಸಲು ನನಗೆ ಇಷ್ಟವಿಲ್ಲ. ಅವರೆಲ್ಲರೂ ಮೇಧಾವಿಗಳು. ಸುವಿಚಾರಗಳನ್ನೇ ನಿಮ್ಮ ಮುಂದಿಟ್ಟಿದ್ದಾರೆ. ಅವನ್ನು ನೀವು ಸ್ಮೃತಿಪಟಲದಲ್ಲಿಡುವುದು ಒಳ್ಳೆಯದು" ಎಂದು ಹೇಳಿಬಿಡಿ.

ಇನ್ನು ಬರೆದುಕೊಂಡು ಬಂದು ಓದುವ ಭಾಷಣದ ಬಗ್ಗೆ ನಾನು ಏನೂ ಹೇಳುವುದಿಲ್ಲ. ಯಾರಾದರೂ ನನ್ನಂಥ ಬಲ್ಲವರಿಗೆ ಹತ್ತು ರೂಪಾಯಿ ಕೊಟ್ಟು ಒಳ್ಳೆಯ ಭಾಷಣ ಬರೆಯಿಸಿ ಅದನ್ನು ಲಕ್ಷಣವಾಗಿ ತಂದು ಓದಿಬಿಡಿ.

*                *                *

# ವನಸ್ಪತಿ

ವನಸ್ಪತಿ ಅಥವಾ ವೆಜಿಟೆಬಲ್ ಘೀ, ರಿಫೈನ್ಡ್ ಆಯಿಲ್, ಇವುಗಳನ್ನು ಇನ್ನು ಮೇಲೆ ಘನೀಕರಿಸಿದ ಕಡಲೆಕಾಯಿ ಎಣ್ಣೆ ಅಥವಾ ಹತ್ತಿ ಬೀಜದ ಎಣ್ಣೆ ಎಂದು ಇಂಡಿಯಾ ಸರ್ಕಾರದವರು ಆಜ್ಞೆ ಮಾಡಿದ್ದಾರೆ.

ನಿಜ; ಆಯಾ ಪದಾರ್ಥಗಳನ್ನು ಅವುಗಳ ನಿಜವಾದ ಹೆಸರಿನಿಂದ ಕರೆಯಬೇಕೆನ್ನುವುದು ಮೂಲತತ್ವಕ್ಕೆ ಸಂಬಂಧಿಸಿದ ವಿಷಯ. ಇದೇ, ಇದಕ್ಕೇ ಅಂತ್ಯಜಯ ದೊರೆಯುತ್ತದೆಂಬುದು ಸದಾ ನಮ್ಮ ಸ್ಮೃತಿಪಟಲದ ಮೇಲಿರಲು ಇಂಡಿಯಾ ಸರ್ಕಾರ "ಸತ್ಯಮೇವ ಜಯತೇ" ಎಂಬ ಸೂತ್ರವನ್ನು ಎಲ್ಲ ರಾಜಶಾಸನಗಳಮೇಲೆ ಅಚ್ಚು ಹಾಕಿದೆ.

ಒಂದು ವಸ್ತುವನ್ನು ಅದರ ನಿಜವಾದ ಮಾನದಂಡದಿಂದ ಅಳೆಯಬೇಕಲ್ಲದೆ ಯಾವ ಕೃತ್ರಿಮ ವಿಧಾನವನ್ನೂ ಅನುಸರಿಸುವುದು ಸೂಕ್ತವಲ್ಲ ಎಂಬುದು ಇಂಡಿಯಾ ಸರ್ಕಾರ ವನಸ್ಪತಿ ಅಲ್ಲ—ಘನೀಕರಿಸಿದ ಕಡಲೆಕಾಯಿ ಎಣ್ಣೆ ವಿಚಾರದಲ್ಲಿ ಅನುಸರಿಸಿದೆ. ಇರುವ ಗುಣಕ್ಕಿಂತ ಇಲ್ಲದ ಯಾವುದೋ ಒಂದು ಗುಣವನ್ನು ಕಲ್ಪಿಸಿಕೊಂಡು ಮೆರೆದರೆ ಅದಕ್ಕೆ ನೈಚ್ಯಾನುಸಂಧಾನ **(Inferiority Complex)** ಎಂದು ಹೇಳುತ್ತಾರೆ

ಹೆಸರಿನಲ್ಲೇನಿದೆ? ಎಂತ ಕೆಲವರು ಮುಖ ಸೊಟ್ಟ ಮಾಡಬಹುದು. ಅಮರಕವಿ ಷೇಕ್ಸ್‌ಪಿಯರ್ "ಗುಲಾಬಿ" ಹೂವನ್ನು ಯಾವ ಹೆಸರಿನಿಂದ ಕರೆದರೂ ಅದು ಗುಲಾಬಿಯ ವಾಸನೆಯನ್ನೇ ಕೊಡುತ್ತದೆ—ಎಂದು ಹೇಳಿದ್ದಾನೆ. ಆದರೆ ಇಂದಿನ ಮನ್ವಂತರದಲ್ಲಿ ಎಲ್ಲರೂ ಹೆಸರಿಗಾಗಿ ಹಾತೊರೆಯುತ್ತಿದ್ದಾರೆ.

ದಾಸರಾಯರೇನೋ ಹಾಡಿದರು; "ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ," ಎಂದು. ಈಗಿನ ಕಾಲದಲ್ಲಿ "ಎಲ್ಲರೂ

ಮಾಡುವುದು ಹೆಸರಿಗಾಗಿ,ದೇಶಸೇವೆಗಾಗಿ." ದೇಶಸೇವೆ ಮಾಡದಿದ್ದವರು ಈಗ ಪಾಪಿಗಳೇ ಸರಿ.

ಸರ್ಕಾರದ ಈ ಹೊಸ ಆಜ್ಞೆಯಿಂದ ವನಸ್ಪತಿಗೆ ಬದಲು ಘನೀಕರಿಸಿದ ಕಡಲೆಕಾಯಿ ಎಣ್ಣೆ ಅಂತ ಕರೆಯುವುದರಿಂದ ಏನೇನು ಪ್ರತಿಕ್ರಿಯೆಗಳಾಗುತ್ತವೆಂಬುದನ್ನು ನೋಡೋಣ. ಎಣ್ಣೆಯೂ ಅಲ್ಲ, ತುಪ್ಪವೂ ಅಲ್ಲದ ಈ ತ್ರಿಶಂಕುಸ್ವರೂಪಿ ವನಸ್ಪತಿಯನ್ನು ಹೋಟಲಿನವರು ಹೆಚ್ಚಾಗಿ ಬಳಸುತ್ತಾರೆ- ನಮ್ಮಂಥ ಗಿರಾಕಿ ಕುರಿಗಳಿಗಾಗಿ. ಈ ಗ್ರೀಸಿನಂಥ ಮೇಣದಿಂದ ಯಾವ ತಿಂಡಿ ತಯಾರಿಸಿದರೂ ಅದು ವಾಸನೆ, ಬಣ್ಣ ಏನನ್ನೂ ಕೊಡುವುದಿಲ್ಲ. ಕಲರ್ ಲೆಸ್, ಓಡರ್‌ಲೆಸ್ ಆಗಿರುವಂತೆ ಯೂಸ್‌ಲೆಸ್ ಸಹ.

ಹತ್ತಿ ಬೀಜದ ಎಣ್ಣೆಯನ್ನು ನಾವು ಸೇವಿಸುತ್ತ ಹೋದಲ್ಲಿ ಹೋರಿಗಳಂತೆ ಬಲಶಾಲಿಗಳಾಗಬಹುದು. ಆದರೆ ನನಗೆ ಬುದ್ಧಿ ಬಲ್ಲ ಹಾಗೆ ಹೋಟಲಿನ ತಿಂಡಿ ತಿಂದು (ವನಸ್ಪತಿಯಿಂದ ತಯಾರಿಸಿದ) ಹೋರಿಯ ಶಕ್ತಿ ಬಂದಿಲ್ಲ—ಆದರೆ ದನದ ಬುದ್ಧಿ ಬಂದಿದೆಯೆಂಬ ಅನುಮಾನ ಉಂಟಾಗಿದೆ.

*　　　*　　　*

## ಅವನಿಗೆ ಬೇಕಾದ್ದು ಎಲ್ಲಾ ಸಿಕ್ಕಿತು

ನ್ಯಾಯಾಧೀಶ—ನೀನು ಯಾಕೆ ಕಳ್ಳತನ ಮಾಡಿದೆ ?

ಅಪರಾಧಿ—ಹೊಟ್ಟೆ ಬಟ್ಟೆಗೆ ಇರಲಿಲ್ಲ. ನನಗೆ ಮನೆ ಮಠವಾಗಲೀ ಬಂಧುಬಳಗವಾಗಲೀ ,ಯಾರೂ ಇಲ್ಲ. ಆದಕ್ಕೆ ಕಳ್ಳತನ ಮಾಡಿದೆ.

ನ್ಯಾಯಾಧೀಶ—ಹಾಗಾದರೆ ನಿನಗೆ ಹೊಟ್ಟೆಗೆ, ಬಟ್ಟೆಗೆ, ಇರಲು ಕೋಣೆ,ಕೆಲವು ಜನ ಸ್ನೇಹಿತರು, ಇಷ್ಟೂ ಒಂಬತ್ತು ತಿಂಗಳವರೆಗೆ ದೊರೆಯುವ ಹಾಗೆ-ಏರ್ಪಾಟು ಮಾಡಿದ್ದೇನೆ.

*　　　*　　　*

## ಗಳು ಸಾಹಿತ್ಯ

ಮಕ್ಕಳುಗಳು ಸ್ಕೂಲುಗಳಿಗೆ ಹೋಗಬೇಕಾದಾಗ ಜೇಬುಗಳಲ್ಲಿ ತಿಂಡಿಗಳನ್ನು ಹಾಕಿಕೊಂಡು ರಸ್ತೆಗಳಲ್ಲಿ ತಿಂದುಕೊಳ್ಳುತ್ತ ಹೋಗುತ್ತಿರುತ್ತವೆ.

# ಅರ್ಪಣೆ

ಸಾಮಾನ್ಯವಾಗಿ ಗ್ರಂಥಕಾರ ಪುಸ್ತಕ ಬರೆದರೆ ಆಗಲಿಲ್ಲ—ಅದನ್ನು ಯಾರಿಗಾದರೂ ಅರ್ಪಿಸಲೇಬೇಕು ಈ "ಅರ್ಪಣೆ" ಯು ಒಂದು ತರಹೆ ರಷೀತಿ ಕೊಟ್ಟಹಾಗೆ, ಅಂತ ನನ್ನ ಭಾವನೆ. ಕೆಲವರು ಅವರ ತಂದೆ ತಾಯಿ ಗಳಿಗೆ ಅರ್ಪಿಸಿರುತ್ತಾರೆ. ಆ ಹೊಲಸು ಪುಸ್ತಕವನ್ನು ಅವರಿಗೆ ಅರ್ಪಿಸುವು ದರ ಬದಲು ಅಪ್ಪನಿಗೆ ಒಂದು ಜೊತೆ ಪಂಚೆ, ಅಮ್ಮನಿಗೆ ಒಂದು ಸೀರೆ ಕೊಂಡುಕೊಟ್ಟರೆ ಅವರೆಷ್ಟೋ ಸಂತೋಷಪಡುತ್ತಾರೆ.

ಕೆಲವರು ಯಾರಿಗೊ ತಾಗಿ, ಗಂಟುಬಿದ್ದು ತಮ್ಮ ಕವಿತಾಸಂಗ್ರಹ ವನ್ನು ಅಚ್ಚುಹಾಕಿಸಿರುತ್ತಾರೆ. ಅದನ್ನು ಆ ಧನಸಹಾಯ ಮಾಡಿದವರಿಗೆ ಅರ್ಪಿಸಿರುತ್ತಾರೆ . ಇದು ಲೆಕ್ಕಾಚಾರಸ್ಥರ ಮಾತು. ನಾನಂತೂ ನನ್ನ ಪುಸ್ತಕ ಗಳನ್ನು "ಭೂರ್‌ಮಲ್ ಭೀಕಾಜಿ" ಅಥವಾ "ಶಿವಳ್ಳಿ ಐತಾಳ" ರಿಗೆ ಅರ್ಪಿಸ ಬೇಕೆಂದಿದ್ದೇನೆ. ಏಕೆಂದರೆ ಆ ಪುಸ್ತಕಗಳಿಂದ ಬರುವ ಅಲ್ಪಸ್ವಲ್ಪ ಹಣ ಅವರ ಪಾಲಾಗುವುದೇ ಖಂಡಿತ.

ಮತ್ತೆ ಕೆಲವರ ಅರ್ಪಣೆಗಳು ಅತಿ ವಿಚಿತ್ರವಾಗಿರುತ್ತವೆ. "ಉಷೆ" ಗೆ-ಎಂದೊಬ್ಬರು ತಮ್ಮ ಕವಿತಾಗುಚ್ಛವನ್ನು ಅರ್ಪಿಸಿದ್ದರು. ಸಾಹಿತಿಗಳು ಮತ್ತು ಓದುಗರೆಲ್ಲ ಆ ಉಷೆ ಯಾರು ಎಂದು ತಲೆ ಕೆಡಿಸಿಕೊಂಡರು. ನಮ್ಮ ಸಾಹಿತಿಗಳಲ್ಲಿ ದಾಕ್ಷಿಣ್ಯಕರಾದವರೊಬ್ಬರು ಊರಿನಲ್ಲಿ ಉಷಾ ಎಂಬ ಹೆಸರಿನ ಹುಡುಗಿಯರನ್ನೆಲ್ಲ ಕೇಳಿದರು. ಅದರಲ್ಲಿ ನಾಲ್ಕುಜನ ಉಷಾ ಎಂಬ ಹೆಸರಿ ನವರು ತಮಗೇ ಅರ್ಪಿತವಾಗಿರಬಹುದೆಂದು ಹೇಳಿದರು. ಕೊನೆಗೆ ಆ ಕವಿ ಯನ್ನೇ ವಿಚಾರಿಸಿದ್ದಲ್ಲಿ ತನಗೆ ಪ್ರತಿದಿನ ಬೆಳಗಿನ ಜಾವದಲ್ಲಿ ಎಚ್ಚರವಾಗುತ್ತಿ ತ್ತೆಂದೂ (ಅದು ಯಾತಕ್ಕೋ ಏನೋ?) ಆಗ ಅವನು ಆ ಕವಿತೆಗಳನ್ನು ಬರೆದನೆಂದೂ, ಆ ಕಾರಣದಿಂದಲೇ ತನ್ನ ಕವಿತೆಗಳನ್ನು "ಉಷೆ" ಗೆ ಅರ್ಪಿಸಿ ದ್ದಾಗಿಯೂ ತಿಳಿಸಿದ. ಹೀಗೆ ತಮ್ಮ ಖಾಸಗಿ ವಿಷಯಗಳನ್ನು ಬಹಿರಂಗ ಪಡಿಸುವುದು ಅಷ್ಟು ಸೂಕ್ತವಲ್ಲೆಂದು ನನ್ನ ಭಾವನೆ.

ಇನ್ನು ಕೆಲವರು ಕೇವಲ ಒಂದೋ ಎರಡೋ ಸಂಕೇತಾಕ್ಷರಗಳನ್ನು ಕೊಟ್ಟಿರುತ್ತಾರೆ. "ಗ॥ ದ. ನ. ಅವರಿಗೆ ಚಿರಸ್ಮರಣೀಯ ಕಾಣಿಕೆ". ಈ ದನ ಯಾರು, ಅವರ ಸ್ನೇಹ ಯಾವಾಗ ಕುದುರಿತು ಎಂದು ಓದುಗರು ವಿನಾಕಾರಣ ಚಡಪಡಿಸಬೇಕಾಗುತ್ತದೆ. ದನ ಎಂಬುದು ನಿಜವಾಗಿಯೂ ದನವೇ ಅಥವಾ ಹೆಸರೇ ಎಂಬುದು ಸಹ ಗೊತ್ತಾಗುವುದಿಲ್ಲ. ನಿಜಕ್ಕೂ ಅದು "ದವನದ ನರಸಿಂಹಯ್ಯ"ನಿಗೆ ಅರ್ಪಿತವಾಗಿರುತ್ತದೆ ಆದರೆ ಈ ರಹಸ್ಯ ನನಗೆ ಗೊತ್ತಿರುವಂತೆ ಇತರರಿಗೆ ಹೇಗೆ ಗೊತ್ತಿರಬೇಕು ?

ಸತ್ತುಹೋದವರ ಹೆಸರಿಗೂ ಪುಸ್ತಕಗಳನ್ನು ಅರ್ಪಿಸುವುದುಂಟು. ಸತ್ತುಹೋದವರು ಆ ಪುಸ್ತಕಗಳ ಅರ್ಪಣೆ ಒಪ್ಪುತ್ತಿದ್ದರೋ ಇಲ್ಲವೋ ಹೇಳಲಾಗುವುದಿಲ್ಲ. ಅಥವಾ ಸತ್ತವರ ಅಭಿರುಚಿ ಇಷ್ಟು ಕೀಳು ಮಟ್ಟದ್ದಿತ್ತೇ ಎಂದು ಶಂಕಿಸಬೇಕಾಗುತ್ತದೆ. ಅಲ್ಲದೆ ಸತ್ತುಹೋದವರಿಗೆ ಅರ್ಪಿಸುವುದರಿಂದ ಬರುವ ಲಾಭವಾದರೂ ಏನು ?

ಅಂಧಕಾರದಲ್ಲಿದ್ದವರಿಗೆ ದಾರಿ ತೋರಿಸಿದವರು, ಸಾಹಿತ್ಯದೇವಿಯ ಗುಡಿಗೆ ದರದರನೆ ಎಳೆದುಕೊಂಡು ಹೋದವರು, ಸ್ಫೂರ್ತಿಯ ಚಿಲುಮೆಯಾದವರು, ಪಶುವಾಗಿದ್ದವರನ್ನು ಮನುಷ್ಯನನ್ನಾಗಿ ಮಾಡಿದವರು, ಇವೆಲ್ಲ ಅರ್ಪಿಸುವಾಗ ಹೇಳುವ ಮಾತುಗಳು.

ಒಂದು ವಿಷಯ: ಯಾರು ನಿಮ್ಮ ಹೆಸರಿಗೆ ಪುಸ್ತಕ ಅರ್ಪಿಸಲು ಬಂದರೂ ಒಪ್ಪಬೇಡಿ. ಮೊದಲು ಆ ಪುಸ್ತಕವನ್ನು ಆರಂಭದಿಂದ ಕೊನೆಯವರೆಗೆ ಓದಿ ನಿಮಗಿಂತಲೂ ಯೋಗ್ಯರಾದವರಿಗೆ ಅದು ಅರ್ಪಿತವಾಗುವುದು ಒಳ್ಳೆತೆಂದು ಹೇಳಿ.



"ಲಂಚ ತಂತ್ರ" ಎಂಬ ಪುಸ್ತಕವನ್ನು ಮಹರ್ನಿಯರೊಬ್ಬರು ಬರೆಯುತ್ತಿದ್ದಾರೆಂದು ತಿಳಿದು ಬಂದಿದೆ.

* * *

ಪೇಟೆಯಲ್ಲಿ ಬೆಲ್ಲ ದೊರೆಯದೆ ಅನೇಕರಿಗೆ ಕಳ್ಳಭಟ್ಟಿ ಸರಾಬು ತಯಾರಿಸಲು ತುಂಬಾ ಅನಾನುಕೂಲ ಆಗಿದೆಯೆಂದು ಪಾನನಿರೋಧ ಇರುವ ಜಿಲ್ಲೆಯೊಂದರ ಸುದ್ದಿಗಾರರು ತಿಳಿಸುತ್ತಾರೆ.

*　　　*　　　*

ಪಾರ್ಲಿಮೆಂಟ್ ಮತ್ತು ಶಾಸನಸಭೆಯ ಸದಸ್ಯರಾಗಲು ಅರ್ಹತೆಗಳನ್ನು ನಿಗದಿ ಮಾಡುವ ನಿರ್ಣಯವೊಂದು ಪಾರ್ಲಿಮೆಂಟಿನಲ್ಲಿ ಚರ್ಚೆಗೆ ಬಂದಿತು.

—ಸದಸ್ಯರ ಅರ್ಹತೆ ಅಂದರೆ ಅವರ ಹಿಂಬಾಲಕರು ಓಟು ಕೊಡುವುದೇ. ಓಟು ಗಳಿಸಲು ಅರ್ಹತೆ ಪಡೆದರೆ ಸದಸ್ಯತ್ವಕ್ಕೆ ಅರ್ಹತೆ ಪಡೆದಂತೆಯೇ.

*　　　*　　　*

ಗೊಬ್ಬರದ ಸಮ್ಮೇಳನವೊಂದು ಸೇರಲಿದೆಯಂತೆ

—ಅಯ್ಯೋ, ಸಮ್ಮೇಳನಗಳಲ್ಲಿ ಹಾಗೇನೇ !

*　　　*　　　*

ಧರ್ಮಯೋಗಿ, ಮರ್ಮಯೋಗಿ ಚಿತ್ರಗಳನ್ನು ನೋಡಿದ ಚಿತ್ರತಯಾರಕರೊಬ್ಬರು "ಚರ್ಮಯೋಗಿ" ಎಂಬ ಚಿತ್ರವನ್ನು ತಯಾರಿಸಲಿದ್ದಾರಂತೆ. ಇದು ಚಮ್ಮಾರನೊಬ್ಬನ ಜೀವನಕ್ಕೆ ಸಂಬಂಧಪಟ್ಟಿದಂತೆ.

*　　　*　　　*

ಚೀನಾಕ್ಕೆ ಗೋಣೀಚೀಲಗಳನ್ನು ಕಳಿಸಿದರೆ ಅದು ಅಕ್ಕಿಯನ್ನು ಕಳಿಸುತ್ತದೆಯಂತೆ.

—ಹಾಗಾದರೆ ನಾವೂ ಎರಡು ಗೋಣೀಚೀಲ ಕಳಿಸುತ್ತೇವೆ.

*　　　*　　　*

## ಚೂಟಿ ಹುಡುಗ

ಮಾರ್ಕೆಟ್ಟಿನಿಂದ ಮೆಜೆಸ್ಟಿಕ್ಕಿಗೆ ಹೋಗುವ ಬಸ್ ಆಗತಾನೇ ಬಂದು ನಿಂತಿದ್ದಿತು. ಹಾವು ಹರಿಯುವಂತೆ ಸೊಟ್ಟ ಸೊಟ್ಟನಾಗಿ ಹಿಂದೊಂದು ಕ್ಯೂ ನಿಂತಿದ್ದಿತು. ಮಧ್ಯಾಹ್ನದ ಮ್ಯಾಟನಿಗೆ ಹೋಗಲು ರಾಮು ಅವಸರವಸರವಾಗಿ ಬಂದ. ಕ್ಯೂನ ಕೊನೆಯಲ್ಲಿ ಅವನು ನಿಲ್ಲಬೇಕಾಯಿತು. ಆದರೆ ರಾಮು ಆ ದಿನದ ಮ್ಯಾಟನಿ ಸಿನೆಮಾಕ್ಕೆ ಹೋಗಲೇಬೇಕು. ರಾಮು ಚೂಟಿ ಹುಡುಗ. ಇಂಥ ಪರಿಸ್ಥಿತಿಗಳಲ್ಲಿ ಅವನ ಸಮಯ ಸ್ಫೂರ್ತಿ ಚರಂಡಿ ನೀರು ಹರಿದಹಾಗೆ ಹರಿಯುತ್ತದ ಕ್ಯೂನ ಕೊನೆಯಲ್ಲಿ ನಿಂತಿರುವ ರಾಮುಗೆ ಬಸ್ ನಲ್ಲಿ ಸೀಟ್ ಸಿಕ್ಕುವುದಿಲ್ಲವೆಂದು ಮುಂದಟ್ಟಯಿತು. ಮಿಂಚಿನಂತೆ ಅವನಿಗೊಂದು ಆಲೋಚನೆ ಹೊಳೆಯಿತು.

ಕ್ಯೂನ ಸುಮಾರು ಹತ್ತನೇ ನಂಬರಿನಲ್ಲಿ ಮಧ್ಯವಯಸ್ಕರೊಬ್ಬರು ನಿಂತಿದ್ದರು. ತಲೆಯ ಮೇಲೊಂದು ಸಿಂಬೆ ರುಮಾಲು, ಮುಖದ ಮೇಲೆ ತಿಥಿದೋಷಗಳ ಪರಿಣಾಮವಾಗಿ ಕತ್ತಿ ಆಡವೆ ಇದ್ದ ಒಂದು ವಾರದ ಹರಕು ಮುರುಕು ಗಡ್ಡ, ಮೂಗಿನ ತುದಿಯ ಮೇಲೆ ಅಲ್ಯೂಮಿನಿಯಂ ಕಟ್ಟಿನ ಕನ್ನಡಕ ಉದ್ದನೆಯ ಕೋಟು, ಪಂಚೆ ಕಚ್ಚೆ, ಕೈಲೊಂದು ಕೋಲು— ಮುಂತಾದುವುಗಳ ಧಾರಿಯಾದ ಒಂದು ವ್ಯಕ್ತಿ ಕ್ಯೂನಲ್ಲಿತ್ತು. ಆ ಮನುಷ್ಯ ಸಿಧಾನವಾಗಿ ಕಾಲೆಳೆದುಕೊಂಡು ಬಸ್‌ನ ಫುಟ್‌ಬೋರ್ಡ್ ಬಳಿ ಬರುತ್ತಿದ್ದ. ರಾಮು ತಾನು ನಿಂತ ಸ್ಥಳದಿಂದ ಸರಕ್ಕನೆ ಜಾರಿದ. ನೇರವಾಗಿ ಫುಟ್‌ಬೋರ್ಡ್ ಬಳಿ ಆ ವ್ಯಕ್ತಿಯ ಕಾಲನ್ನು ತನ್ನ ಬೂಟ್ಸ್‌ಕಾಲಿನಿಂದ ಅಮಿಕಿದ. ಆ ಮನುಷ್ಯ ಭರತನಾಟ್ಯದಲ್ಲಿನ ಅನೇಕ ಭಂಗಿಗಳನ್ನು ಪ್ರದರ್ಶಿಸಿದ. ಹಿಂದಿನಿಂದ ನುಗ್ಗಿದ ಜನ ಅವನ ಮೇಲೆ ಬಿದ್ದಿತು. ಈ ಗಲಾಟೆಯಲ್ಲಿ ರಾಮು ಸುಖವಾಗಿ ಸೀಟಾರೂಢನಾಗಿದ್ದ. ಬಸ್‌ನಲ್ಲಿ ಎಲ್ಲರಿಗೂ ಸ್ಥಳ ಸಿಕ್ಕರೂ ಆ ಸಿಂಬೆ ಸುತ್ತಿದ ವ್ಯಕ್ತಿಗೆ ಸೀಟು ಸಿಗಲಿಲ್ಲ. ರಾಮು ತನ್ನ ಚೂಟಿತನಕ್ಕೆ ತಾನೇ ಮೆಚ್ಚಿಕೊಂಡು ಮೀಸೆಯ ತುದಿಯಲ್ಲಿ ಮುಗುಳ್ನಗೆ ನಗುತ್ತಿದ್ದ.

ಇನ್ನೊಂದು ಸಾರಿಯೂ ಇಂತಹುದೇ ಒಂದು ಸಂದರ್ಭ ಒದಗಿತು. ಮಲ್‌ಪಂಚೆಗಳನ್ನು ಕೊಡುವವಾಗಿ ಯಾವುವೋ ಸ್ಟೋರಿನವರು ಸಾರಿದ್ದರು. ಬಟ್ಟೆ ಕಾಣದೆ ಕಂಗಾಲಾದ ಜನ, ಆ ಸ್ಟೋರ್ ಮುಂದೆ ಜಾತ್ರೆ ಸೇರಿದರು. ಚೋಟ ರಾಮು ಹಾಜರಾಗಿದ್ದ ಸ್ಟೋರ್‌ಬಾಗಿಲು ಇನ್ನೂ ತೆಗೆದಿರಲಿಲ್ಲ. ರಾಮು ತನ್ನ ಅನೇಕ ಸಾಹಸಗಳನ್ನು ಜನರ ಬಾಯಿ ನೀರೂರುವಂತೆ ವರ್ಣಿಸುತ್ತಿದ್ದ. ಆ ಹೊತ್ತಿಗೆ ಸರಿಯಾಗಿ ಸಿಂಬೆ ಸುತ್ತಿದ ವ್ಯಕ್ತಿ ಅಲ್ಲಿಗೆ ಬಂದಿತು. ಆ ವ್ಯಕ್ತಿಯ ಜೊತೆಗೆ ಒಬ್ಬ ಚಿಕ್ಕ ಹುಡುಗನಿದ್ದ. ಸಿಂಬೆವ್ಯಕ್ತಿಯು ವಿಚಿತ್ರ ಉಡುಗೆ ತೊಡಿಗೆಗಳೊಂದಿಗ ಆತ ಬಿಕ್ಕುತ್ತಿದ್ದ. ಪ್ರತಿ ಅಕ್ಷರವೂ ಕೆಲವಾರು ನಿಮಿಷಗಳಾದ ಮೇಲೆ ಅವನ ಬಾಯಿಂದ ಹೊರಬರುತ್ತಿದ್ದವು ರಾಮು ಪಕ್ಕದಲ್ಲಿ ನಿಂತಿದ್ದವನೊಬ್ಬನಿಗೆ ಕಣ್ಣುಹೊಡೆದು ಒಂದು ತಮಾಷೆ ಮಾಡುವುದಾಗಿ ಹೇಳಿ "ನ . ಮ . ಸ್ಕಾ...ರ" ಅಂತ ವ್ಯಕ್ತಿಯನ್ನು ಅನುಕರಿಸಿದ. ಆ ಮನುಷ್ಯನಿಗೆ ಕೋಪಬಂದು "ಬೋ ಬೋ....ಮ" ಅಂದ. "ನೀವು ಒಂದಕ್ಷರ ಹೇಳಿ, ನಾನು ಭರ್ತಿಮಾಡಿಕೊಳ್ಳುತ್ತೇನೆ" ರಾಮು ಹೇಳಿದ. ಜನ ಘೊಳ್ಳೆಂದಿತು. ವ್ಯಕ್ತಿಗೆ ಸಿಟ್ಟು ತಡೆಯದಾಗಿ ತನ್ನ ಕೈಲಿದ್ದ ಕೋಲನ್ನು ಎತ್ತಿದ. ರಾಮು ಮೂರು ಮೈಲಿ ದೂರ ಒಂದೇ ಸಾರಿ ಸಿನಿಮಾದ ನಾಯಕ ಹಾರುವಂತೆ ಹಾರಿ ಹಲ್ಲುಕಿರಿದ. ಜನ ಬಟ್ಟೆ ಕೊಳ್ಳುವುದನ್ನು ಬಿಟ್ಟು ಈ ತಮಾಷೆ ನೋಡುತ್ತ ನಿಂತಿತು.

. . .

ಯಾವುದೋ ಒಂದು ದೊಡ್ಡ ಆಫೀಸಿನಲ್ಲಿ ಕೆಲಸವೊಂದು ಖಾಲಿ ಇದೆಯೆಂದು ಪತ್ರಿಕೆಗಳಲ್ಲಿ ಜಾಹಿರಾತು ಕೊಟ್ಟಿದ್ದರು. ಅದರಲ್ಲಿ, ಉಮೇದುವಾರರಲ್ಲಿ ಯಾವ ಯಾವ ಗುಣಗಳಿರಬೇಕೆಂದು ತಿಳಿಸಿದ್ದರೋ ಅವೆಲ್ಲವೂ ರಾಮುವಿನಲ್ಲಿದ್ದವು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ರಾಮುವನ್ನು ನೋಡಿಯೇ ಈ ಜಾಹಿರಾತನ್ನು ಪ್ರಕಟಿಸಿದಂತಿದ್ದಿತು.

ರಾಮು ತನ್ನ ಏಕಮಾತ್ರ ಸೂಟನ್ನು ಒಗೆದು, ಲಾಂಡ್ರಿಯವನಿಗೆ ಸಾಲ ಹೇಳಿ ಇಸ್ತ್ರಿಮಾಡಿಸಿದ. ಸ್ನೇಹಿತನೊಬ್ಬನಿಗೆ ಅಂಗಲಾಚಿ ಬೂಟ್

ಪಾಲಿಷ್ ತಂದು ಬಣ್ಣ ಹಾಕಿದ. ಹಳೆಯ ಬ್ಲೇಡ್ ಒಂದರಿಂದ ಮುಖ ಕ್ಷೌರದ ಶಾಸ್ತ್ರವನ್ನೂ ಮಾಡಿಕೊಂಡ. ಆಫೀಸಿನ ಮ್ಯಾನೇಜರ್ ಅನ್ನು ಮಧ್ಯಾಹ್ನ ಎರಡು ಗಂಟೆಗೇ ಬಂದು ನೋಡಬೇಕೆಂದು ಕರೆ ಬಂದಿತ್ತು ಅದರಂತೆ ರಾಮು ಒಂದು ಗಂಟೆಗೇ ಮನೆ ಬಿಟ್ಟಿದ್ದ.

ಎರಡು ಗಂಟೆ ಡಣ್ ಡಣ್ ಹೊಡೆಯುವುದೇ ತಡ ರಾಮು ಹೊರ ನಿಂತಿದ್ದ ಬಿಲ್ಲೆ ಜವಾನನಿಗೆ ತಾನು ಆಫೀಸಿನ ಮ್ಯಾನೇಜರ್‌ಅನ್ನು ನೋಡ ಬೇಕಾಗಿದೆಯೆಂದು ತಿಳಿಸಿ, ತನ್ನ ಹೆಸರಿನ ಚೀಟಿಯನ್ನು ಕಳಿಸಿದ ಐದು ನಿಮಿ ಷಗಳ ನಂತರ ಒಳಕ್ಕೆ ಬರಬಹುದೆಂದು ಕರೆಬಂದಿತು.

ಮ್ಯಾನೇಜರು ಆ ದಿನದ "ಹಿಂದೂ" ಪತ್ರಿಕೆಯಲ್ಲಿ ಮುಳುಗಿದ್ದರು. ಅವರ ಗುಮಾಸ್ತೆಯೊಬ್ಬ ಹೇಳಿದ. "ನಾವು ಕೆಲಸಕ್ಕೆ ಜಾಹಿರಾತುಕೊಟ್ಟಿದ್ದ ಉಮೇದುವಾರರು ಬಂದಿದ್ದಾರೆ." ಆಫೀಸರು ಪತ್ರಿಕೆಯ ಹಾಳೆಗಳನ್ನು ಹಾಕಿ ರಾಮುವನ್ನು ಒಂದು ಬಾರಿ ನೋಡಿದರು. ನಿಮಿಷಾರ್ಧದಲ್ಲಿ ಇಪ್ಪತ್ತು ನಾಲ್ಕು ಮಹಡಿ ಮೆಟ್ಟಿಲುಗಳನ್ನೂ ಇಳಿದು ರಸ್ತೆಯಲ್ಲಿದ್ದ ರಾಮು. ಸಿಂಬೆ ರುಮಾಲು, ಉದ್ದನೆಯ ಕೋಟ್, ಅಲ್ಯುಮಿನಿಯಂ ಕನ್ನಡಕದ, ಬಿಕ್ಕುವ ವ್ಯಕ್ತಿಯೆ ಆ ಆಫೀಸಿನ ಮ್ಯಾನೇಜರ್.

———

ಶ್ರೀ ಕುಲಕರ್ಣಿ ಬಿಂದುಮಾಧವ ಅವರು "ಕೆರೆಗೆ ಹಾರ" ಎಂಬೊಂದು ಪುಸ್ತಕ ಬರೆದಿದ್ದಾರೆ.

—ಈ ಪುಸ್ತಕದ ಶೀರ್ಷಿಕೆಯಿಂದ ಸ್ಫೂರ್ತಿಗೊಂಡ ಶ್ರೀ ನಾಡಿಗೇರರು "ಭಾವಿಗೆ ಬೀಳ" ಎಂಬ ಪುಸ್ತಕ ಬರೆಯಲು ಹೊರಟಿದ್ದಾರೆ.

* * *

ಜಪಾನಿನಲ್ಲಿ ಬೈಸಿಕಲ್ ತಯಾರಿಕೆಯನ್ನು ಗೃಹ ಕೈಗಾರಿಕೆ ಎಂದು ಕರೆದಿದ್ದಾರೆ.

—ನಮ್ಮಲ್ಲಿ ಬೈಸಿಕಲ್ ಕದಿಯುವುದನ್ನು ಕೆಲವರು ಗೃಹ ಕೈಗಾರಿಕೆ ಯಾಗಿಟ್ಟುಕೊಂಡಿದ್ದಾರೆ.

# ಬೀಗಮುದ್ರೆ

ಇರೋದು ಬಸವನಗುಡಿ, ಆದರೂ ಮಲ್ಲೇಶ್ವರದಲ್ಲಿರೋ ಷಡ್ಡಕನ ಮನೆಗೆ ಆರು ತಿಂಗಳಾದರೂ ಹೋಗುವುದಕ್ಕಾಗಿಲ್ಲ. ಮನೆಯಲ್ಲಿ, ಹೆಂಡತಿಯಂತೂ ಟೆಲಿಗ್ರಾಫ್ ಡೆಮ್ಮಿ ಕಟೆದ ಹಾಗೆ ಕಟೆಯುತ್ತಿದ್ದಾಳೆ. "ಇದೇ ಊರ್ನಲ್ಲಿ ತಂಗೀ ಮನೆ ಇದೆ, ಆರು ತಿಂಗಳಾದ್ರೂ ಹೋಗ್ಬೇಡವೇ ?" ಅಲ್ಲಿಗೆ ಹೋಗಿ ಬರ್ಬೇಕು ಅಂತ ನನಗೂ ಮನಸ್ಸಿದೆ. ಆದರೆ ಪುರಸೊತ್ತಿಲ್ಲ, ಹಾಳಾದ್ದು. ಬೆಂಗಳೂರಿನಲ್ಲಿ ಏನು ಬೇಕಾದ್ರೂ ಸಿಕ್ಕುತ್ತೆ, ಪುರುಸೊತ್ತು ಮಾತ್ರ ಸಿಕ್ಕೋದಿಲ್ಲ.

ನನಗೆ ಚಾಕರಿ ಇರುವುದು ಏರ್ ಕ್ರಾಫ್ಟ್‌ನಲ್ಲಿ. ಸೂರ್ಯ ಹುಟ್ಟುವುದಕ್ಕೆ ಮುಂಚೆ ಮನೆಯಿಂದ ಕಂಬಿ ಕಿತ್ತರೆ, ಬರುವುದು ಸೂರ್ಯಾಸ್ತಮವಾದ ಮೇಲೇ ! ಇನ್ನು ಅಲ್ಲಿ ಇಲ್ಲಿ ಹೋಗಿ ಬರುವುದಾದರೂ ಹೇಗೆ ? ಎಲ್ಲರಿಗೂ ಬರುವಂತೆ ನಮಗೂ ವಾರಕ್ಕೊಂದು ಭಾನುವಾರ ಬರುತ್ತೆ. ಕೆಲವು ಸಾರಿ ಎಕ್‌ಸ್ಟ್ರಾ ಕೆಲಸಮಾಡಲು ಫ್ಯಾಕ್ಟರಿಗೆ ಹೋಗಬೇಕಾಗುತ್ತೆ. ಕೆಲವು ಸಾರಿ ಕ್ಷೌರ ಮಾಡಿಸಿಕೊಳ್ಳಲು ತುಂಬಿದ ಸೆಲೂನುಗಳಿಗೆ ಹೋಗುವುದು, ಕಳೆದು ಹೋದ ಟ್ರಂಕಿನ ಬೀಗದ ಕೈ ತರುವುದು, ಮುರಿದ ಟ್ರಂಕು ಛತ್ರಿಗಳನ್ನು ಸರಿಪಡಿಸುವುದು, ಮುಂತಾದ ಸಣ್ಣ ಪುಟ್ಟ ಕೆಲಸಗಳಲ್ಲಿಯೇ ಬಂದ ಭಾನುವಾರ ಬಾರದಿದ್ದಂತೆ ಮಾಯವಾಗಿ ಹೋಗುತ್ತದೆ.

ವಾರದ ಆರಂಭದಿಂದ ವಾರಾಂತ್ಯದ ವರೆಗೆ ಕೆಲಸ ಮಾಡಿದ ನಮ್ಮಂಥವರಿಗೆ ಭಾನುವಾರವನ್ನು ವಿರಾಮದಲ್ಲಿಯೆ ಕಳೆಯಬೇಕೆಂಬ ಆಸೆ. ಆದರೆ ಈ ಆಸೆ ಯಾವ ಭಾನುವಾರದಲ್ಲಿಯೂ ಈಡೇರಿಲ್ಲ.

ಈ ಬಾರಿ ಸಂಬಳ ಬಂದ ಮಾರನೇ ಭಾನುವಾರ ಮಲ್ಲೇಶ್ವರಕ್ಕೆ ಹೋಗಬೇಕೆಂದು ನಿಶ್ಚಯವಾಯ್ತು. ಪೂರ್ವಭಾವಿಯಾಗಿ ಆಗಲೇಬೇಕಾದ ಸಿದ್ಧತೆಗಳೂ ಆಗಿದ್ದುವು. ನನ್ನ ಹಿರಿಯ ಮಗಳು ಬಣ್ಣದ ಲಂಗ, ಜಾರ್ಜೆಟ್ ಜಂಪರ್, ಮಗ ಶ್ರೀಧರ ಚಡ್ಡಿ ಬುಷ್‌ಕೋಟ್ ಹಾಕಿಕೊಳ್ಳಬೇಕೆಂದೂ

ತೀರ್ಮಾನವಾಯಿತು ನನ್ನ ಹೆಂಡತಿಯು ಮನೆಯಲ್ಲಿರುವ ಏಕಮಾತ್ರ ರೇಷ್ಮೆ ಸೀರೆ ಉಟ್ಟುಕೊಳ್ಳಬೇಕೆಂದೂ ಇತ್ಯರ್ಥವಾಯಿತು

ಮಧ್ಯಾಹ್ನ ಮೂರು ಗಂಟೆಯ ಬಸ್ಸಿನಲ್ಲಿ ಮಲ್ಲೇಶ್ವರಕ್ಕೆ ಹೋಗಿ ಸಂಜೆಯ ವರೆಗೂ ಅಲ್ಲಿದ್ದು ಸಂಜೆ ಏಳು ಗಂಟೆಯ ಹೊತ್ತಿಗೆ ಮನೆಗೆ ಬರಬೇಕೆಂದೂ ಮಾತನಾಡಿಕೊಂಡಿದ್ದೆವು

ಎಚ್ಚರವಾಗಿದ್ದರೂ ಭಾನುವಾರ ಎಂಟು ಗಂಟೆಯ ವರೆಗೂ ಮಲಗಿರಬೇಕೆಂದೇ ನನ್ನ ಹಟ. ದೊಡ್ಡ ಮನುಷ್ಯರು ಜಾಗ್ರತೆ ಏಳುವುದಿಲ್ಲವೆಂದು ಕೇಳಿದ್ದೇನೆ, ಒಂದು ದಿನದ ಮಟ್ಟಿಗಾದರೂ ದೊಡ್ಡ ಮನುಷ್ಯನಾಗಬೇಕೆಂದು ನನ್ನ ಆಸೆ. ಆವರೆ ಅಡಿಗೆ ಮನೆಯಿಂದ ಅಶರೀರವಾಣಿ ಕೇಳಬಂತು. "ಶ್ರೀಧರನಿಗೆ ಹಲ್ಲು ನೋವಂತೆ, ಡಾಕ್ಟ್ರ ಪತ್ರ ಕರೆದುಕೊಂಡು ಹೋಗಿ" ನನ್ನ ಹೆಂಡತಿ ಅರಚಿದಳು ಶ್ರೀಧರ ಮೂಲೆಯಲ್ಲಿ ನಾಯಿಮರಿಯ ಹಾಗೆ "ಕುಂಯ್" ಗುಟ್ಟುತ್ತಿದ್ದ ನನ್ನ ಹುಟ್ಟಿದ ನಕ್ಷತ್ರವನ್ನು ಶಪಿಸುತ್ತ, ಮುಖ ತೊಳೆದ ಶಾಸ್ತ್ರ ಮಾಡಿ, ಕಾಫಿ ಎಂದು ಹೇಳಲಾದ ದ್ರಾವಕ ಹೀರಿ, ಕೋಟು ನೇತುಹಾಕಿಕೊಂಡು, ಶ್ರೀಧರನನ್ನು ಕರೆದುಕೊಂಡು ಡಾಕ್ಟ್ರ ಮನೆಗೆ ಹೋದೆ; ಜವಾನ ಹೇಳಿದ "ಡಾಕ್ಟ್ರಿಗೆ ಮೈಯಲ್ಲಿ ಚನ್ನಾಗಿಲ್ಲ, ಹಲ್ಲು ನೋವು, ಮಲಗಿದ್ದಾರೆ".

"ನಾನೇ ನೇಟಿವ್ ಔಷಧಿ ಕೊಡುತ್ತೇನೆ ಬಾರೋ," ಎಂದು ಹೇಳಿ ಶ್ರೀಧರನನ್ನು ಕರೆದುಕೊಂಡು ಬಂದು ಪಟಕದ ನೀರನ್ನು ಮುಕ್ಕಳಿಸಲು ಹೇಳಿದೆ. ಅವನು ನೋವು ಹೋಗದಿದ್ದರೂ ನನ್ನ ಕೆಟ್ಟ ಮುಖ ನೋಡಿ ತೆಪ್ಪಗಾದ.

ಹಿರಿಯ ಮಗಳು ರಂಗು ಸ್ಕೂಲಿನಲ್ಲಿ ಹೇಳಿಕೊಟ್ಟ "ಲೆಜೀಮ್" ಅನುಕರಿಸುತ್ತ ಗೋಡೆಗೆ ನೇತುಹಾಕಿದ್ದ ಕನ್ನಡಿಯನ್ನು ಬೀಳಿಸಿ—ಒಂದು ಕನ್ನಡಿ ಸಾವಿರ ಆಗುವಂತೆ ಮಾಡಿದ್ದಳು ' ಸರಿ ಈ ರಾದ್ಧಾಂತಗಳನ್ನೆಲ್ಲ ಸರಿಪಡಿಸಿ ಊಟ ಮಾಡಿದ್ದಾಯಿತು. ಒಂದು ಗಳಿಗೆ ಮಲಗೋಣವೆಂದು ಹಾಸಿಗೆ ಉರುಳಿಸಿದೆ, ಆಗಲೇ ಹೊತ್ತಾಯಿತೆಂದು ನನ್ನ ಹೆಂಡತಿ ಹೇಳಿದ್ದರಿಂದ,

ಎಲ್ಲರೂ ಲಗುಬಗೆಯಿಂದ ಬಟ್ಟೆ ಬರೆಗಳನ್ನು ಹಾಕಿಕೊಂಡೆವು. ಮಧ್ಯಾಹ್ನದ ಕಾಫಿ ಬಸಿದು ಎಲ್ಲರೂ ಮನೆಯಿಂದ ಹೊರಟೆವು.

ಮಲ್ಲೇಶ್ವರದ ಬಸ್ಸಿನಲ್ಲಿ ನಮ್ಮನ್ನು ಕುರಿಗಳಂತೆ ತುಂಬಿದರು. ಯಾರದೋ ಕಾಲು, ಯಾರದೋ ಕೈ ಹಿಡಿದು ಎದ್ದು ಬಿದ್ದು ಮುಗ್ಗುರಿಸಿ ಮಲ್ಲೇಶ್ವರ ಮುಟ್ಟಿದೆವು.

ಸರಿ, ಬಸ್ ಸ್ಟ್ಯಾಪ್‌ನಿಂದ ಮೂರೇ ಫರ್ಲಾಂಗು ನನ್ನ ಷಡ್ಡಕನ ಮನೆ. ಮೆರವಣಿಗೆ ಮಾಡಿಕೊಂಡು ಹೋದೆವು. ಆದರೆ....ಷಡ್ಡಕನ ಮನೆಗೆ ಬೀಗ ಹಾಕಿತ್ತು. ಅಕ್ಕ ಪಕ್ಕದ ಮನೆಯವರನ್ನು ವಿಚಾರಿಸಿದೆವು. "ಈಗ ಒಂದು ಗಂಟೆ ಕೆಳಗೆ ಅವರೆಲ್ಲಾ ಎಲ್ಲಿಗೋ ಹೋದ್ರು, ಎಲ್ಲಿಗೆ ಹೋದ್ರೋ ನಮಗೆ ಗೊತ್ತಿಲ್ಲ" ಒಂದು ಹುಡುಗಿ ಕತ್ತು ಕುಲಕಿಸುತ್ತಾ, ಹುಬ್ಬು ಹಾರಿಸುತ್ತಾ ಹೇಳಿದಳು. ಬಂದ ದಾರಿಗೆ ಸುಂಕವಿಲ್ಲೆಂದು ಓ ಲಕ್ಷ್ಮಣಾ ಅಂತ ಮನೆ ಕಡೆ ದಾರಿ ಹಿಡಿದೆವು

"ಎದ್ರಿಗೆ ಆ ನಂಜಮ್ಮ ಬಂದಿದ್ದಕ್ಕೆ ಹೀಗಾಯ್ತು" ಅಂತ ನನ್ನ ಹೆಂಡತಿ ಹೇಳಿದಳು.

ಮತ್ತೆ ಬಸ್ಸಾರೂಢರಾಗಿ ಬಸವನಗುಡಿಗೆ ಬಂದೆವು.

ಮನೆಯ ಬಾಗಿಲು ತೆಗೆಯುತ್ತಲೇ ಒಂದು ಚೀಟಿ ಕಾಣಿಸಿತು "ಅಪರೂಪಕ್ಕೆ ನಿಮ್ಮ ಮನೆಗೆ ಬಂದರೆ ನೀವು ಎಲ್ಲಿಯೋ ಸಿನಿಮಾಕ್ಕೋ, ನಾಟಕಕ್ಕೋ ಹೋಗಿದ್ದಿರಿ. ಮುಖ್ಯ ಬಂದದ್ದು ನಮ್ಮ ತಪ್ಪು. ಆ ಊದ್ದದಿಂದ ಈ ಊದ್ದದ ವರೆಗೆ ಕಾಲೆಳೆದುಕೊಂಡು ಬಂದರೆ ನೀವೇ ಇರಬಾರದೇ?........ ನರಸಿಂಹಯ್ಯ"

ನನ್ನ ಹೆಂಡತಿ ತನ್ನ ನಾಲಗೆಯನ್ನು ರಬ್ಬರಿನ ಹಾಗೆ ಎಳೆಯಲು ಯತ್ನಿಸಿದಳು. ನಾನು ಹೇಳಿದೆ, "ನಾವೂ ಇಂಥ ಒಂದು ಚೀಟೀನ ಅವರ ಮನೇಲಿ ಹಾಕಿದ್ದರೆ ಚೆನ್ನಾಗಿತ್ತು"

"ಅಷ್ಟು ಬುದ್ಧಿ ನಿಮಗಿದ್ದಿದ್ದರೆ ನನ್ನ ಬಾಳು ಹೀಗೇಕೆ ಆಗುತ್ತಿತ್ತು" ಅಂತ ಹೇಳುತ್ತ ಸೀರೆಯ ಸೆರಗನ್ನು ಕಣ್ಣಿಗೆ ಒತ್ತಿಕೊಂಡಳು.



## ಬೋರ್ಡ್ ಬರಹ

ಅಲ್ಲಿ, ಇಲ್ಲಿ ಹೋಗಿ ಮೋಸ ಹೋಗಬೇಡಿ–ನೇರವಾಗಿ ನಮ್ಮಲ್ಲಿಗೆ ಬನ್ನಿ



ಈಚೆಗೆ ಬೆಂಗಳೂರಿನಲ್ಲಿ ಕಾಫೀಪುಡಿಯೊಂದಿಗೆ ಈಚಲಬೀಜದ ಪುಡಿಯನ್ನು ಸೇರಿಸುತ್ತಿರುವುದು ಪತ್ತೆಯಾಗಿದೆ.

—ಅದಕ್ಕೇ ಕಾಫೀ ಕುಡಿದರೆ ಏನೋ ಕುಡಿದಹಾಗಿರುತ್ತೆ.



# ಪತ್ರಿಕಾಭಿಪ್ರಾಯಗಳು

"ಸರ್ವಮಂಗಳ"

—ಶ್ರೀ 'ಚದುರಂಗ' ರು ಹಳ್ಳಿಗರ ಮಾತನ್ನು ಅವರ ಗ್ರಾಮ್ಯ ಭಾಷೆಯಲ್ಲಿಯೇ ಆಡಿದ್ದಾರೆ. ಹಳ್ಳಿಗರ ಆಚಾರ, ನಡೆ, ನುಡಿ, ಆಸೆ, ಆಕಾಂಕ್ಷೆ ಎಲ್ಲವನ್ನೂ ಯಥಾವತ್ತಾಗಿ ಚಿತ್ರಿಸಿದ್ದಾರೆ. ಯಾವುದೇ ದೃಷ್ಟಿಯಿಂದ ನೋಡಿದರೂ ಕಾದಂಬರಿಯು ಸರ್ವಾಂಗಸುಂದರವಾಗಿದೆ. ಪ್ರತಿ ಪುಟವೂ ತನ್ನತನವನ್ನು ಸಾರುತ್ತದೆ.

....ಅಂದವಾದ ಮುದ್ರಣ ಆಕರ್ಷಕ ರಕ್ಷಾಕವಚ ಕಾದಂಬರಿಗೆ ಹೆಚ್ಚಿನ ಮೆರಗು ತಂದಿವೆ. ಕನ್ನಡಿಗರೆಲ್ಲರೂ ಅತ್ಯಾದರದಿಂದ ಸ್ವಾಗತಿಸಲೇಬೇಕಾದ ಚದುರಂಗರ ಕಾದಂಬರಿ "ಸರ್ವಮಂಗಳ"

—ಪ್ರಜಾಮತ.



"... ಕಥೆಯ ಆರಂಭ, ಓಟ, ಸನ್ನಿವೇಶ ಕಲ್ಪನೆ, ಸನ್ನಿವೇಶಗಳಲ್ಲಿನ ಮಾನವತಾಭಾವದ ಚಿಲುಮೆ, ವಸ್ತುವಿನ ಸರಳ ಸ್ವರೂಪ, ಜೀವನದರ್ಶನಗಳ ಬಗ್ಗೆ 'ಚದುರಂಗ' ರ ಲೇಖನಿ ಅಸಾಮಾನ್ಯ ಗತಿಯಲ್ಲಿ ಹರಿಯುತ್ತಿದೆ ಎಂದು ಹೇಳಬಲ್ಲೆ . . . . ಒಟ್ಟಿನಲ್ಲಿ "ಸರ್ವಮಂಗಳ" ಕನ್ನಡ ಕಾದಂಬರಿಗಳ ಹಾರದಲ್ಲಿ ಒಂದು ಸರ್ವಸುಂದರ ಕುಸುಮ. ಬಾಡದ ಹೂ.

—ಪ್ರಜಾವಾಣಿ



The author has written a first-rate novel which has portrayed village-life with remarkable effect and which must enrich kannada literature

—Indian Express

# ಶಾರದಾ ಸಾಹಿತ್ಯ ಮಾಲೆಯ ಪ್ರಕಟನೆಗಳು

೧. ಕಾರವಾನ್
೨.–೩ ಸ್ವಾತಂತ್ರ್ಯದೆಡೆಗೆ
೪. ಜೀವನಕಲೆ
೫. ಮುಗುಳುನಗೆ
೬. ಸ್ವಪ್ನಸುಂದರಿ
೭.–೮ ಆಲದ ಹೂ
೯. ಹುಡುಗಾಟ
೧೦. ಶವದಮನೆ
೧೧. ಎದಿರೇಟು
೧೨-೧೩ ಸರ್ಪಮಂಗಳ
೧೪. ಕೇಡಿಗನ ಕಿಡಿಗಳು.

## ಲಲಿತ ಸಾಹಿತ್ಯದ ಪ್ರಕಟನೆ.

೧ ಮಾಯಾ